# ವೀರಶೈವ
# ಪಂಚಪೀಠ ಪರಂಪರೆ

ಶ್ರೀ ಜಗದ್ಗುರು ಮೂಲ ಪಂಚಾಚಾರ್ಯರು













ಚೆನ್ನ ಚೇತನ ಪ್ರಕಾಶನ, ಹೊನ್ನಾಳಿ



ಹೊನ್ನರಳಿಯ ದಳ - ಒಂದು

## ವೀರಶೈವ

# ಪಂಚಪೀಠ ಪರಂಪರೆ


ಲೇಖಕರು :

ಡಾ॥ ಚಂದ್ರಶೇಖರಶಿವಾಚಾರ್ಯ ಸ್ವಾಮಿಗಳು, M.A., Ph.D.

ಅಮರೇಶ್ವರಮಠ, ಗುಳೇದಗುಡ್ಡ,

ರೀಸರ್ಚ ಎಸೋಸಿಏಟ್

ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ

ವಾರಾಣಸಿ.





ಪ್ರಕಾಶಕರು :

ಚೆನ್ನಚೇತನ ಪ್ರಕಾಶನ, ಬೃಹಚ್ಛಿಲಾ ಮಠ ((ಹಿರೇಕಲ್ಮಠ)

ಹೊನ್ನಾಳಿ-577217

"Veerashaiva Panchapeetha Parampare"
By H. H. Dr. Chandrashekhara Shivacharya Swamiji,
Guledagudda.



Published by :
Chennachetana Prakashana
Hirekalmatha Honnali-577217
Dist-Shimoga, Karnatak (India)-1988

Price : Rs. 15/-



ಪ್ರಥಮಮುದ್ರಣ : ೩೦೦೦ ಪ್ರತಿಗಳು



ಪ್ರಕಟಣ ದಾನಿಗಳು :
ಶ್ರೀ ಬಸವೇಶ್ವರ ಸೇವಾಸಕ್ತ ಮಂಡಳಿ,
ದೊಡ್ಡಪೇಟೆ, ರಾಣೇಬೆನ್ನೂರು.

ಬೆಲೆ : ಹದಿನೈದು ರೂಪಾಯಿಗಳು

ಮುದ್ರಕರು :
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

श्री जगद्गुरु विश्वाराध्य विजयतेतराम्

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

## ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀ ಜಗದ್ಗುರು ರೇಣುಕಮಹಾಚಾರ್ಯ ಭವ್ಯ ಮಂಗಲ ಪರಂಪರಾನುಗತ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರರುದ್ರಮುನಿದೇವ ಶಿವಾಚಾರ್ಯಭಗವತ್ಪಾದ ಮಹಾಸ್ವಾಮಿಗಳವರ

## ಶುಭಾಶೀರ್ವಾದ ಸಂದೇಶ

"ವೀರಶೈವ ಪಂಚಪೀಠಗಳ ಪರಂಪರೆ" ಕೃತಿಯನ್ನು ವಿಹಂಗಮ ದೃಷ್ಟಿಯಿಂದ ಅವಲೋಕಿಸಿ ಶ್ರೀ॥ ಜ॥ ಚಿತ್ತಕ್ಕೆ ಸಮಾಧಾನ ತಂದಿತು. ವೀರಶೈವ ಪಂಚಪೀಠಗಳ ಪರಂಪರೆ ಮತ್ತು ಸಂಸ್ಕೃತಿ ವಿಶಿಷ್ಟವಾದುದು. ಇದರ ಮಹಿಮೆಯನ್ನು ಶಿವಾಗಮಾದಿ ಅನಂತ ಗ್ರಂಥಗಳು ಸಾರುತ್ತಿವೆ. ಅಲ್ಲದೇ ಅನೇಕ ಇತಿಹಾಸಕಾರರೂ ಸಹ ಪಂಚಪೀಠಗಳ ಪ್ರಾಚೀನತ್ವವನ್ನು ಸವಿಸ್ತಾರವಾಗಿ ನಿರೂಪಿಸಿರುವರು ವೀರಶೈವ ಧರ್ಮದರ್ಶನಗಳಿಗೆ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ಮೂಲಕಾರಣರು. ನೂರೊಂದು ಸ್ಥಲಗಳ ಅರ್ಥವತ್ತಾದ ಷಟ್ಸ್ಥಲಗಳನ್ನು ಶ್ರೀ ಜಗದ್ಗುರು ರೇಣುಕರು ಮೊಟ್ಟಮೊದಲಿಗೆ ಅಗಸ್ತ್ಯರಿಗೆ ಅನುಗ್ರಹಿಸಿ ಉದ್ಧರಿಸಿರುವರು.

ಆಗಮ ಸಂಸ್ಕೃತಿಯನ್ನಾಗಲಿ, ಹರಪ್ಪಾ ಮೊಹೆಂಜೊದಾರೋ ಸಂಸ್ಕೃತಿಯನ್ನಾಗಲಿ ಅವಲೋಕನ ಮಾಡದೇ ಕೇವಲ ಭ್ರಮೆಯಿಂದ ಕೆಲವು ಜನರು ಬಾಯಿಗೆ ಬಂದಂತೆ ಮಾತಾಡಿ ಬರೆದು ವರ್ತಿಸುವ ಜನರಿಗೆ ಯಥಾರ್ಥ ಧರ್ಮ ತತ್ವಗಳ ಅರಿವಿಲ್ಲವೆಂದೇ ಹೇಳಬಹುದು. ಇದರ ವಾಸ್ತವಿಕ ವಿಷಯ ತಿಳಿಯಲೆಂಬ ಸದುದ್ದೇಶದಿಂದ ಈ ಕೃತಿ ಮೈದಾಳಿ ಬಂದಿದೆ. ಈ ಕೃತಿಯಲ್ಲಿ ಶ್ರೀ ಜಗದ್ಗುರು ಪಂಚಪೀಠಗಳ ಪವಿತ್ರ ಪರಂಪರೆಯನ್ನು ಮತ್ತು ನೆಲೆ-ಹಿನ್ನೆಲೆಗಳನ್ನು ಆಮೂಲಾಗ್ರವಾಗಿ ಎಲ್ಲರಿಗೂ ತಿಳಿಯುವಂತೆ ಬರೆದಿರುವರು. ಕೆಲವು

ಜನರು ಶಿವ-ರುದ್ರರು ಮತಸ್ಥಾಪಕರೆಂದು ಬರೆದು ಹೇಳುವವರಿಗೆ ಕೃತಿಕಾರರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿರುವರು. ಶಿವ-ರುದ್ರರು ಉಪದೇಶಿಸಿದ್ದು ದೇವಲೋಕದಲ್ಲಿಯೇ ವಿನಃ ಭೂಲೋಕದಲ್ಲಲ್ಲ. ಶಿವಸಿದ್ಧಾಂತವನ್ನು ಮುಂಮೊದಲು ಭೂಲೋಕದಲ್ಲಿ ಸಾರಿ ನೆಲೆಗೊಳಿಸಿದವರೇ ಶ್ರೀ ಜಗದ್ಗುರು ಪಂಚಾಚಾರ್ಯರೆಂಬುದನ್ನು ಮರೆಯುವಂತಿಲ್ಲ.

ಒಂದು ವರ್ಗದ ಜನ ಬಸವಣ್ಣನವರೇ ವೀರಶೈವ ಧರ್ಮಸ್ಥಾಪಕರೆಂತಲೂ ಕರೆಯುವರು. ಇಂಥವರಿಗೆ ಪ್ರಾಚೀನ ಕೃತಿಗಳ ಆಳವಾದ ಅಧ್ಯಯನ ಇಲ್ಲವೆಂದೇ ತಿಳಿಯಬೇಕು. ಬಸವಣ್ಣನವರ ವಚನಸಾರದಿಂದಲೇ ಆತನ ಗುರುಭಕ್ತಿ ವ್ಯಕ್ತವಾಗುವುದನ್ನು ಅವರ ವಚನಗಳಲ್ಲಿಯೇ ಕಾಣಬಹುದು. ಬಸವಣ್ಣನವರು ಧರ್ಮೋದ್ಧಾರಕರೇ ವಿನಃ ಧರ್ಮಸ್ಥಾಪಕರಲ್ಲ ಎಂಬುದನ್ನು ಎಲ್ಲರೂ ತಿಳಿಯಬೇಕು. ಸ್ಮಾರ್ತ ಬ್ರಾಹ್ಮಣ ವಂಶದಲ್ಲಿ ಹುಟ್ಟಿ ವೀರಶೈವ ವಿಶಿಷ್ಟ ಸಂಸ್ಕಾರ ಹೊಂದಿದ ಬಸವಣ್ಣ ಹೇಗೆ ಧರ್ಮಸ್ಥಾಪಕನಾದಾನು ? ಆತನು ಎಲ್ಲಿಯೂ ತಾನು ಗುರು ಎಂದು ಹೇಳಿಕೊಂಡಿಲ್ಲ. ಅವನ ಹೆಸರನ್ನು ಹೇಳ ಹೊರಟಿರುವ ಅದೆಷ್ಟೋ ಜನ ಪವಿತ್ರ ಹೆಸರಿಗೆ ಕಲಂಕತರುತ್ತಿರುವುದನ್ನು ತಿಳಿದು ವಿಷಾದಿಸಬೇಕಾಗಿದೆ. ಶ್ರೀ ಜಗದ್ಗುರು ಪಂಚಾಚಾರ್ಯರೇ ವೀರಶೈವ ಧರ್ಮ ಸ್ಥಾಪಕರು ಮತ್ತು ನಿಜವಾದ ಧರ್ಮ ಗುರುಗಳಾಗಿದ್ದಾರೆ. ಈ ವಿಷಯ ಪ್ರತಿಪಾದನೆಗಾಗಿ ಅನಂತ ಉದಾಹರಣೆಗಳೊಂದಿಗೆ ಕೃತಿಕಾರರು ವಿವರಿಸಿರುವರು. ನಾಗನೂರು ಬೃಹನ್ಮಠದ ಲಿಂಗೈಕ್ಯ ಪಂ॥ ಶ್ರೀ ಕಾಶೀನಾಥ ಶಾಸ್ತ್ರಿಗಳವರ ತರುವಾಯ ಗುಳೇದ ಗುಡ್ಡದ ಡಾ॥ ಶ್ರೀ ಷ॥ ಬ್ರ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಸಹ ಪಂಚ ಪೀಠಗಳ ಪ್ರಾಚೀನತ್ವ, ಪರಂಪರೆ ಮತ್ತು ಸಿದ್ಧಾಂತ ಶಿಖಾಮಣಿಯ ಮೇಲೆ ಹೊಸಬೆಳಕು ಹೊಮ್ಮುವ ಅನೇಕ ಪುಸ್ತಕಗಳನ್ನು ಬರೆದು ಪ್ರಕಾಶನ ಪಡಿಸಿರುವರು. ಪ್ರಸ್ತುತ : " ವೀರಶೈವ ಪಂಚ ಪೀಠಗಳ ಪರಂಪರೆ " ನಿಜವಾದ ವಿಷಯ ವಿವರಣೆ ಹೊತ್ತು ಹೊರ ಬಂದಿದೆ. ಈ ಕೃತಿಯತ್ತ ಸರ್ವರೂ ಗಮನ ಹರಿಸಿ ಓದಿ ತಿಳಿದರೆ ಅವರ ಶ್ರಮಸಾರ್ಥಕವಾಗುತ್ತದೆ. ಈ ಪವಿತ್ರ ಕೃತಿಯ ಪ್ರಕಾಶನವನ್ನು ಪಂಚಪೀಠಗಳ ಅಭಿಮಾನಿಗಳಾದ ಹೊನ್ನಾಳಿ ಹಿರೇಕಲ್ಮಠದ ಶ್ರೀ ಷ॥ ಬ್ರ॥ ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ನಿರ್ವಹಿಸಿ ಸಮಾಜಕ್ಕೆ ಕೊಟ್ಟಿರುವರು. ಕೃತಿಕರ್ತರ ಮತ್ತು

ಪ್ರಕಾಶಕರ ಕೆಲಸ ಸ್ತುತ್ಯವಾದುದು ; ಮತ್ತು ಸಮಯೋಜಿತವಾದುದಾಗಿದೆ. ಇದನ್ನು ಕಂಡು ಶ್ರೀ ಜ॥ ಗಳಿಗೆ ಸಂತೋಷವುಂಟಾಗಿದೆ.

ಪರಮ ದಯಾಳು ಶ್ರೀ ಪಾರ್ವತಿ-ಪರಮೇಶ್ವರರು ಹಾಗೂ ಶ್ರೀಜಗದ್ಗುರು ರೇಣುಕಾಚಾರ್ಯರು ಕೃತಿಕರ್ತರಿಗೂ, ಪ್ರಕಾಶಕರಿಗೂ ಮತ್ತು ಓದುಗರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಬಾಳೆಹೊನ್ನೂರು
5-3-1988

ಇತ್ಯಾನಂತ ಶಿವಾಶಿಷಃ,
ಸಮಸ್ತ ಸನ್ಮಂಗಳಾನಿ ಭವಂತು.

|| ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

## ಶ್ರೀಮದ್ ವಿಮಲ ವೀರಶೈವ ಮಹಾಮತಸ್ಥಾಪನಾಚಾರ್ಯ
## ಶ್ರೀ ವಟಕ್ಷೇತ್ರ ಸಿದ್ಧೇಶ್ವರಲಿಂಗೋದ್ಭವ
## ಶ್ರೀಜಗದ್ಗುರು ದಾರುಕಾಚಾರ್ಯ ಪರಂಪರಾಗತ
## ಶ್ರೀ ಉಜ್ಜಯಿನಿ ಸದ್ಧರ್ಮಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷ
## ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ
## ಮಹಾ ದಿವ್ಯ ಸನ್ನಿಧಿಯಿಂದ

## ಶುಭಾಶೀರ್ವಾದ ಸಂದೇಶ

'ವೀರಶೈವ ಪಂಚಪೀಠ ಪರಂಪರೆ' ಎಂಬ ಹೊತ್ತಗೆ ಹೊನ್ನಾಳಿ ಹಿರೇಕಲ್ಮಠದ 'ಚೆನ್ನ-ಚೇತನ ಪ್ರಕಾಶನದ ಪ್ರಪ್ರಥಮ ಕೃತಿಯಾಗಿದೆ. ಮಹಾವಿದ್ವಾಂಸರೂ, ಸಂಶೋಧಕರೂ, ವಾರಾಣಶಿಯ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ, ಸುಪ್ರಸಿದ್ಧ ಲೇಖಕರೂ ಆದ ಶ್ರೀ ಷ॥ ಬ್ರ॥ ಡಾ॥ ಚಂದ್ರಶೇಖರಸ್ವಾಮಿಗಳು ಈ ಗ್ರಂಥದ ಲೇಖಕರು. ವೀರಶೈವ ಪಂಚಪೀಠಗಳ ಮೂಲ ಪಂಚಾಚಾರ್ಯರಿಂದ ಮೊದಲ್ಗೊಂಡು ಇಂದಿನ ಮಹಾಚಾರ್ಯರವರೆಗಿನ ಚರಿತ್ರೆಯನ್ನು ಈ ಗ್ರಂಥವು ಒಳಗೊಂಡಿರುವುದರಿಂದ ಐತಿಹಾಸಿಕ ಮಹತ್ವ ಈ ಗ್ರಂಥಕ್ಕೆ ಲಭಿಸಿದೆ ಅಲ್ಲದೆ ವೀರಶೈವ ಧರ್ಮ ದರ್ಶನಗಳ ಸ್ವರೂಪವನ್ನು ನಮ್ಮ ಧರ್ಮಗ್ರಂಥವಾದ "ಸಿದ್ಧಾಂತಶಿಖಾಮಣಿ" ಯನ್ನು ಆಧರಿಸಿ ತಿಳಿಸಲು ಯತ್ನಿಸಿದ್ದರಿಂದ ದರ್ಶನ ಗ್ರಂಥದ ಲಕ್ಷಣವೂ ಇದಕ್ಕಿದೆ. ಹೀಗೆ ಧರ್ಮ, ದರ್ಶನ, ಚರಿತ್ರೆಗಳ ತ್ರಿವೇಣಿಸಂಗಮದಂತಿರುವ ಈ ಗ್ರಂಥವನ್ನು ಪ್ರತಿಯೊಬ್ಬ ವಾಚಕರೂ ಶ್ರದ್ಧಾಭಕ್ತಿಯಿಂದ ಅವಲೋಕಿಸಿದರೆ ಅವರ ಬುದ್ಧಿಗೆ ಕವಿದ ಮಂಕು ಮಾಯವಾಗುವುದರಲ್ಲಿ ಸಂಶಯವಿಲ್ಲ! ಬುದ್ಧಿಗೆ ಬೆಳಕನ್ನು, ಹೃದಯಕ್ಕೆ ತೃಪ್ತಿಯನ್ನು, ಭಾವಕ್ಕೆ ಭಕ್ತಿಯನ್ನು ನೀಡಬಲ್ಲ ಉಪಯುಕ್ತ ಗ್ರಂಥವಿದಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

ಶ್ರೀಮತ್ ಸಾಕ್ಷಾತ್ ಶ್ರೀ ಗಿರಿರಾಜ ಸೂರ್ಯಸಿಂಹಾಸನ ಶಾಖಾ ಸಂಸ್ಥಾನ ಹೊನ್ನಾಳಿ ಹಿರೇಕಲ್ಮಠದ ಸ್ಥಿರಪಟ್ಟಾಧ್ಯಕ್ಷರಾದ ಶ್ರೀ ಒಡೆಯರ

ಷ|| ಬ್ರ|| ಚಂದ್ರಶೇಖರಶಿವಾಚಾರ್ಯಸ್ವಾಮಿಗಳು “ಚಿನ್ನ-ಚೇತನ ಪ್ರಕಾಶನ”ವೆಂಬ ನೂತನ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೀರಶೈವ ಧರ್ಮ, ದರ್ಶನ, ಚರಿತ್ರೆ, ಸಂಶೋಧನೆಗಳನ್ನು ಒಳಗೊಂಡ ಗ್ರಂಥಗಳನ್ನು ಪ್ರಕಟಪಡಿಸುವ ಘನ ಉದ್ದೇಶಹೊಂದಿರುವದು ಸ್ತುತ್ಯಕಾರ್ಯವಾಗಿದೆ. ಅಂತೆಯೇ ಇಂಥ ಗ್ರಂಥವನ್ನು ಪ್ರಕಾಶನದ ಮೊದಲ ಕೃತಿಯಾಗಿ ಅವರು ತರುತ್ತಿದ್ದಾರೆ. ಅವರಿಗೂ, ಕೃತಿ ಕರ್ತರಿಗೂ, ಓದುಗರಿಗೂ ಶ್ರೀಜಗದ್ಗುರು ಪಂಚಾಚಾರ್ಯರು ಆಯುರಾರೋಗ್ಯ ಭಾಗ್ಯಾಧಿಗಳನ್ನು ಅನುಗ್ರಹಿಸಲೆಂದು ಶುಭಾಶೀರ್ವಾದಸಂದೇಶ ದಯಪಾಲಿಸಲಾಗಿದೆ.

ಉಜ್ಜಯನಿ, ಇತ್ಯಾಶಿಷಃ.

೨-೩-೧೯೮೮

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಶ್ರೀಮತ್ ಹಿಮವತ್ ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ

ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರಲಿಂಗಶಿವಾಚಾರ್ಯ

ಮಹಾಸ್ವಾಮಿಗಳವರ ಸನ್ನಿಧಾನದಿಂದ

ಮುಕ್ಕಾಂ : ಚೆನ್ನಗಿರಿ ದಿ॥ ೨೩-೧-೧೯೮೮

ಹೊನ್ನಾಳಿ ಹಿರೇಕಲ್ಮಠದ ಷ. ಬ್ರ. ಒಡೆಯರ್ ಶ್ರೀ ಚಂದ್ರಶೇಖರ ಶಿವಾಚಾರ್ಯಸ್ವಾಮಿಗಳು ತಮ್ಮ ಮಠದಿಂದ " ಚೆನ್ನ-ಚೇತನಪ್ರಕಾಶನ "ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದು ಸನ್ನಿಧಿಗೆ ಅತ್ಯಾನಂದವನ್ನುಂಟು ಮಾಡಿದೆ.

" ಚೆನ್ನ-ಚೇತನ ಪ್ರಕಾಶನ "ದ ಮೂಲಕ ಪ್ರಪ್ರಥಮ ಕೃತಿಯಾಗಿ " ವೀರಶೈವ ಪಂಚಪೀಠ ಪರಂಪರೆ '' ಎಂಬ ಗ್ರಂಥ ಪ್ರಕಟವಾಗುತ್ತಿರುವದು ಸಂತೋಷದ ಸಂಗತಿಯಾಗಿದೆ. ಡಾ॥ ಷ. ಬ್ರ. ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಅಮರೇಶ್ವರ ಮಠ, ಗುಳೇದಗುಡ್ಡ ಅವರು ಪ್ರಕಾಂಡ ಪಂಡಿತರೂ ಹಾಗೂ ವೀರಶೈವ ಸಾಹಿತ್ಯ-ಇತಿಹಾಸ-ದರ್ಶನಗಳನ್ನು ಆಳವಾಗಿ ಅಧ್ಯಯನ ಮಾಡಿದವರೂ ಆಗಿದ್ದಾರೆ. ಅಂಥವರು ಈ ಗ್ರಂಥವನ್ನು ರಚಿಸಿ ಪರಿಶ್ರಮಪಟ್ಟು ಆಧಾರ ಸಹಿತ ಪಂಚಪೀಠಗಳ ಆಮೂಲಾಗ್ರ ಪರಿಚಯ ಮಾಡಿಕೊಟ್ಟಿದ್ದಾರೆ. ಅದು ಶ್ರೀ ಸನ್ನಿಧಿಗೆ ಹೆಮ್ಮೆಯನ್ನುಂಟು ಮಾಡಿದೆ. ಇಂಥ ಅನೇಕ ಗ್ರಂಥಗಳು ಅವರಿಂದ ಮೂಡಿಬರಲಿ ಎಂದು ಆಶೀರ್ವದಿಸಲಾಗಿದೆ. ಅಲ್ಲದೆ ಹೊನ್ನಾಳಿ ಸ್ವಾಮಿಗಳು ಇಂಥಗ್ರಂಥಗಳನ್ನು ಪ್ರಕಟಿಸುತ್ತಿರುವದು ವೀರಶೈವ ಸಾಹಿತ್ಯ ಹಾಗೂ ಇತಿಹಾಸಕ್ಕೆ ಮಹತ್ತರ ಕೊಡುಗೆಯಾಗಿದೆ. " ಚೆನ್ನ-ಚೇತನ ಪ್ರಕಾಶನ "ದಿಂದ ಇಂಥ ಅನೇಕ ಮಹತ್ವಪೂರ್ಣ ಗ್ರಂಥಗಳು ಪ್ರಕಟವಾಗಲಿ ಎಂದು ಆಶಿಸಿ ಶುಭ ಹಾರೈಸಲಾಗಿದೆ.

ಉತ್ತಮ ಗ್ರಂಥಗಳನ್ನು ಓದುವ ಹಾಗೂ ಸಂಗ್ರಹಿಸುವ ಸದ್ಬುದ್ಧಿಯನ್ನು ಶ್ರೀಕೇದಾರನಾಥನು ಸಕಲರಿಗೂ ಅನುಗ್ರಹಿಸಲೆಂದು ಹಾರೈಸಲಾಗಿದೆ.

ಇತ್ಯಾಶಿಷಃ.

Srimadgiriraja Suryasimhasanadheeshwar
Sri 1008 Srishaila Jagadguru Umapathi Panditharadhya
Shivacharya Mahaswamiji
Sree Jagadguru Suryasimhasana Mutt, Srishaila (A.P )
Atmakur (Dist. Karnool)    Guntakal (Dist. Anantapur)

ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೦೮ ಶ್ರೀಶೈಲ ಜಗದ್ಗುರು ಉಮಾಪತಿ ಪಂಡಿತಾರಾಧ್ಯ
ಶಿವಾಚಾರ್ಯ ಮಹಾಸ್ವಾಮಿಗಳವರು,
ಶ್ರೀ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನ ಮಠ,
ಗುಂತಕಲ್ಲು (ಜಿ. ಅನಂತಪುರ)    ಶ್ರೀಶೈಲ (ಜಿ. ಕರ್ನೂಲು)
ಆತ್ಮಕೂರು (ಜಿ. ಕರ್ನೂಲು)

Ref No : 101/88/89 Camp : ಶ್ರೀಶೈಲ. Date : 24/2/88

## ಶುಭಾಶೀರ್ವಾದ ಸಂದೇಶ

ಶ್ರೀ ಜಗದಾದಿ ಜಗದ್ಗುರು ಪಂಚಾಚಾರ್ಯರು ಪರಶಿವನ ಚಿತ್ಕಲಾ ಸ್ವರೂಪ ಗುರು ಸಾರ್ವಭೌಮರಾಗಿ ಮೆರೆದವರಾಗಿರುತ್ತಾರೆ. ಇವರುಗಳಿಂದ ಸ್ಥಾಪಿತವಾದ ಶಕ್ತಿ ವಿಶಿಷ್ಟಾದ್ವೈತಾತ್ಮಕ ವೀರಶೈವ ಧರ್ಮವು ಅತ್ಯಂತ ಪ್ರಾಚೀನವಾದುದು. ಸಕಲ ವೇದಾಗಮಗಳು ಪುರಾಣೇತಿಹಾಸಗಳೇ ಇದಕ್ಕೆ ಸಾಕ್ಷಿಯಾಗಿರುತ್ತವೆ. ಪೂರ್ವಕಾಲದಿಂದ ಇಂದಿನವರೆಗೂ ಈ ಮತವು ಶಾಸ್ತ್ರವೇತ್ತರು ಹಾಗೂ ಸದ್ವರ್ತನ ಶೀಲರಾದ ಸದ್ಗುರುಗಳಿಂದ ದಿನೇ ದಿನೇ ಪ್ರಜ್ವಲಿಸುತ್ತ ತನ್ನದೇ ಆದ ಒಂದು ವೈಶಿಷ್ಟ್ಯತೆಯನ್ನು ಕಾಪಾಡಿಕೊಂಡು ಬಂದಿರುವದು.

ವಿಶ್ವತೋಮುಯವಾಗಿ ಹಬ್ಬಿ ರಾಜಾಧಿರಾಜರಿಂದಲೂ, ಮಹರ್ಷಿಗಳಿಂದಲೂ ಸಮ್ಮಾನಿತವಾದ ವೀರಶೈವ ಮತವು ಜಗತ್ತಿನ ಆಧ್ಯಾತ್ಮರಂಗದಲ್ಲಿ ಭವ್ಯ ಹಾಗೂ ದಿವ್ಯ ಪರಂಪರೆಯನ್ನು ಹೊಂದಲು ಮತಸ್ಥಾಪಕರಾದ ಜಗದ್ಗುರು ಪಂಚಾಚಾರ್ಯರ ಕೊಡುಗೆಯು ಅದ್ವಿತೀಯ ಸ್ಥಾನವನ್ನು ಪಡೆದಿರುತ್ತದೆ.

ಕಮಲಗಳ ವಿಕಾಸಕ್ಕೆ ಸೂರ್ಯನ ಹುಟ್ಟುವಿಕೆ ಎಷ್ಟೊಂದು ಪ್ರಧಾನ ಪಾತ್ರ ಹೊಂದಿದೆಯೋ ಅಷ್ಟೇ ಇಂದಿನ ಸಮಾಜದ ಸಂಘಟನೆಗೆ ಮತ್ತು ಜಗತ್ತಿನ ಶಾಂತಿಗೆ ಜಗದಾಚಾರ್ಯರ ನೆನಹು ಮತ್ತು ಅವರ ತತ್ವಗಳು ಅವಶ್ಯವಾಗಿರುತ್ತವೆ.

### ಜಗದಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಪೀಠಗಳು

(೧) ಶ್ರೀ ಜಗದ್ಗುರು ವೀರ ಸಿಂಹಾಸನ ರೇಣುಕಾರಾಧ್ಯ ಪೀಠ,
ಬಾಳೇಹೊನ್ನೂರು.

(೨) ಶ್ರೀ ಜಗದ್ಗುರು ಸದ್ಧರ್ಮಸಿಂಹಾಸನ ಮರುಳಾರಾಧ್ಯ ಪೀಠ, ಉಜ್ಜಯಿನಿ.

(೩) ಶ್ರೀ ಜಗದ್ಗುರು ವೈರಾಗ್ಯ ಸಿಂಹಾಸನ ಏಕೋರಾಮಾರಾಧ್ಯ ಪೀಠ,
ಹಿಮವತ್ ಕೇದಾರ.

(೪) ಶ್ರೀ ಜಗದ್ಗುರು ಸೂರ್ಯಸಿಂಹಾಸನ ಪಂಡಿತಾರಾಧ್ಯ ಪೀಠ, ಶ್ರೀಶೈಲ.

(೫) ಶ್ರೀ ಜಗದ್ಗುರು ಜ್ಞಾನಸಿಂಹಾಸನ ವಿಶ್ವಾರಾಧ್ಯ ಪೀಠ, ಶ್ರೀಕಾಶಿ.

ಈ ಪಂಚಮಹಾಪೀಠಗಳು ಸಮಾಜದ ಪ್ರತೀಕವಾಗಿ ಸಮಾಜದ ಸೂತ್ರದಂತೆ ಅತ್ಯಂತ ಪ್ರಾಚೀನ ಕಾಲದಿಂದ ಇಂದಿನವರೆಗೆ ವಿರಾಜಮಾನ ಗೊಂಡಿರುತ್ತವೆ. ಈ ಮಹಾಪೀಠಗಳಲ್ಲಿ ಅನೂಚೀನವಾಗಿ ಶಿಷ್ಯ ಪರಂಪರೆಯಲ್ಲಿ ಅನೇಕ ಜಗದ್ಗುರುಗಳು ತಮ್ಮ ತಮ್ಮ ತಪಃ ಪ್ರಭಾವದಿಂದಲೂ ಮತ್ತು ಪ್ರಕಾಂಡ ಪಾಂಡಿತ್ಯ ಬಲದಿಂದಲೂ ಅಘಟಿತ ಘಟನಾ ಕಾರ್ಯಗಳನ್ನು ತೋರಿಸಿ ವೀರಶೈವ ಧರ್ಮದ ಹೆಚ್ಚಳವನ್ನು ಹೆಚ್ಚಿಸಿ ಜಗದ್ವಂದ್ಯರಾಗಿರುತ್ತಾರೆ.

ಜಗದಾಚಾರ್ಯರುಗಳಿಂದ ಸ್ಥಾಪಿಸಲ್ಪಟ್ಟ ಪವಿತ್ರ ಪೀಠಗಳ ಮತ್ತು ಶಿಷ್ಯ ಪರಂಪರೆಯಲ್ಲಿ ಅನೂಚೀನವಾಗಿ ಬಂದಿರುವ ಜಗದ್ಗುರು ಪಂಚ ಪೀಠಾಧೀಶ್ವರರುಗಳ ಪರಿಚಯ ಮಾಡಿಕೊಡುವ ಕೃತಿಯು ಸಮಾಜಕ್ಕೆ ಅವಶ್ಯಕವಾಗಿ ಬೇಕಾಗಿತ್ತು. ಆತ್ಮೀಯರೂ, ಸಹೃದಯಿಗಳೂ, ವಿದ್ವಾಂಸರಾದ ಡಾ॥ಶ್ರೀ॥ಷ॥ಬ್ರ॥ ಚಂದ್ರಶೇಖರಶಿವಾಚಾರ್ಯಸ್ವಾಮಿಗಳು ಅಮರೇಶ್ವರ ಮಠ ಗುಳೇದಗುಡ್ಡ ಅವರಿಂದ "ವೀರಶೈವ ಪಂಚಪೀಠಗಳ ಪರಂಪರೆ" ಎಂಬ

ಸದ್ಕೃತಿಯು ಹೊರಹೊಮ್ಮುತ್ತಿರುವದು ಶ್ಲಾಘನೀಯವಾಗಿರುತ್ತದೆ. ಪಂಚಪೀಠಗಳ ಮತ್ತು ಪೀಠಾಚಾರ್ಯರುಗಳ ನಿಜಸ್ವರೂಪ ಜ್ಞಾನ ತಿಳಿಸು ವಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸಿದ ಕೃತಿಯಾಗಿರುತ್ತದೆ.

ಈ ಕೃತಿಯ ಪ್ರಕಾಶನ ಸೇವೆಯನ್ನು ಶ್ರೀಶೈಲ ಜಗದ್ಗುರು ಸೂರ್ಯ ಸಿಂಹಾಸನ ಪಂಡಿತಾರಾಧ್ಯ ಮಹಾಪೀಠದ ಶಾಖಾನುವರ್ತಿಗಳಾದ ಶ್ರೀ ಷ॥ ಬ್ರ॥ ಒಡೆಯರ್ ಚಂದ್ರಶೇಖರಶಿವಾಚಾರ್ಯಸ್ವಾಮಿಗಳು ಹಿರೇಕಲ್ಮಠ ಹೊನ್ನಾಳಿ ಅವರು ತಮ್ಮ ಶ್ರೀಮಠದ "ಚೆನ್ನ-ಚೇತನ ಪ್ರಕಾಶನ"ದಿಂದ ಮುದ್ರಿಸಿ ಸಮಾಜದ ಎದುರಿಗೆ ತರುತ್ತಿರುವದು ಸಂತಸವನ್ನುಂಟು ಮಾಡಿದೆ.

ಕೃತಿಕರ್ತರಿಗೂ ಮತ್ತು ಪ್ರಕಾಶಕರಿಗೂ ಶ್ರೀ ಜಗದಾದಿ ಜಗದ್ಗುರು. ಪಂಚಾಚಾರ್ಯರು ಮತ್ತು ಭ್ರಮರಾಂಬಾ ಸಹಿತ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯವರು ಸಕಲ ಸನ್ಮಂಗಲಗಳನೀಯಲೆಂದು ತುಂಬು ಹೃದಯದಿಂದ ಪ್ರಾರ್ಥಿಸಿ, ಆಶಿಸಲಾಗಿದೆ.

ಇತ್ಯಾಶಿಷಃ.

## ವೀರಶೈವ ಮಠಸ್ಥಾಪನಾಚಾರ್ಯ
## ಶ್ರೀವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ
## ಶ್ರೀಜಗದ್ಗುರು ವಿಶ್ವೇಶ್ವರಶಿವಾಚಾರ್ಯಮಹಾಸ್ವಾಮಿಗಳವರು
## ಜಂಗಮವಾಡಿಮಠ, ಶ್ರೀಕ್ಷೇತ್ರ ಕಾಶಿ, ವಾರಾಣಸಿ (U.P.)
## Jangamawadimath, Varanasi (U.P.)
## ಶ್ರೀ ಮಹಾಸನ್ನಿಧಾನದಿಂದಾ

"ವೀರಶೈವ ಪಂಚಪೀಠ ಪರಂಪರೆ" ಈ ಪುಸ್ತಕವನ್ನು ಆಮೂಲವಾಗಿ ಅವಲೋಕಿಸಿದ್ದೇವೆ. ಕಾಶೀ ವಿಶ್ವಾರಾಧ್ಯ ಗುರುಕುಲದಲ್ಲಿ ಹದಿನೆಂಟು ವರ್ಷಗಳಿಂದ ವಿದ್ಯಾವ್ಯಾಸಂಗದಲ್ಲಿ ಕಾಲ ಕಳೆಯುತ್ತಿರುವ, ಈಗಾಗಲೇ ಅನೇಕ ಸಾಹಿತ್ಯ ಕುಸುಮಗಳನ್ನು ಸಮಾಜಕ್ಕಿತ್ತು ಪ್ರಖ್ಯಾತರಾಗಿರುವ ಗುಳೇದಗುಡ್ಡ ಅಮರೇಶ್ವರ ಮಠದ ಶ್ರೀ ಷ. ಬ್ರ. ಡಾ. ಚಂದ್ರಶೇಖರಶಿವಾಚಾರ್ಯರ ಈ ಪುಸ್ತಕವು ವೀರಶೈವಮಹಾಮಠಸ್ಥಾಪನಾಚಾರ್ಯರಾದ ಆದಿ ಪಂಚಾಚಾರ್ಯರನ್ನು ಮೊದಲುಗೊಂಡು ಆಧುನಿಕ ಪಂಚಾಚಾರ್ಯರ ಪರ್ಯಂತರ ಇರುವ ಅವಿಚ್ಛಿನ್ನ ಪರಂಪರೆಯನ್ನು ವ್ಯಕ್ತಗೊಳಿಸುತ್ತದೆ.

ನಾಗನೂರು ಬೃಹನ್ಮಠಾಧ್ಯಕ್ಷರಾದ ಲಿಂ.ವೇ.ಪಂ. ಕಾಶೀನಾಥಶಾಸ್ತ್ರಿಗಳ "ಶ್ರೀಜಗದ್ಗುರು ಪಂಚಾಚಾರ್ಯರಪ್ರಾಚೀನತ್ವ"ಎಂಬ ಪುಸ್ತಕದ ತರುವಾಯ ಅನೇಕ ಮಹತ್ವದ ವಿಷಯಗಳನ್ನೊಳಗೊಂಡ ಇವರ ಪುಸ್ತಕವು ಐತಿಹಾಸಿಕ ತತ್ತ್ವಗಳನ್ನವಲೋಕಿಸುವ ಜಿಜ್ಞಾಸುಗಳಿಗೆ ಕೈದೀವಿಗೆಯಂತಿದೆ.

ಹೊನ್ನಾಳಿ ಹಿರೇಕಲ್ಮಠದ ಶ್ರೀ ಷ. ಬ್ರ. ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ತಮ್ಮ ಮಠದಲ್ಲಿ ವಿನೂತನವಾಗಿ ಪ್ರಾರಂಭಿಸಿರುವ "ಚೆನ್ನ ಚೇತನಪ್ರಕಾಶನ" ಸಂಸ್ಥೆಯಿಂದ ಮೊದಲನೆಯ ಗ್ರಂಥವನ್ನಾಗಿ ಇದನ್ನು ಪ್ರಕಾಶನಗೊಳಿಸಿ ಗುರುತರವಾದ ಗುರುಸೇವೆಯನ್ನು ಮಾಡಿದ್ದಾರೆ. ಈ ಕಾರ್ಯದಲ್ಲಿ ಪ್ರೊ|| ಅ. ಸಿ. ಹಿರೇಮಠ ರಾಣೀಬೆನ್ನೂರು ಇವರಾದರೂ ಬಹಳಷ್ಟು ಆಸ್ತೆವಹಿಸಿ ಕಾರ್ಯಮಾಡಿದ್ದಾರೆ. ಇವರೆಲ್ಲರಿಗೂ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರು ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕಾಪಾಡಲಿ. ಜಿಜ್ಞಾಸು ವಾಚಕರು ಆದರದಿಂದ ಈ ಗ್ರಂಥವನ್ನು ಅವಲೋಕಿಸುವದಾಗಲೆಂದು ಹಾರೈಸೋಣವಾಗಿದೆ.

ವಾರಾಣಸಿ
10–2–88

ಶಿವಂಭೂಯಾತ್

ಇತ್ಯಾಶಿಷಃ

श्री जगद्गुरु शिवाचार्यो विजयतेतराम् ।

# ಮುನ್ನುಡಿ

ಡಾ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ನಿಗಮಾಗಮಗಳ ಆಧಾರದ ಮೇಲೆ ಬರೆದಿರುವ 'ವೀರಶೈವ ಪಂಚಪೀಠ ಪರಂಪರೆ'ಯು ಅವರದೇ ಆದ ಪೀಠಿಕೆಯೊಡನೆ ಪ್ರಕಟವಾಗುತ್ತಲಿರುವುದು ವೀರಶೈವ ಸಮಾಜದ ಪುಣ್ಯೋದಯವೆನಿಸಿದೆ. ಇದು ಸರ್ವ ಮಾನವರ ಹೃದಯದ ಕಗ್ಗತ್ತಲೆಯನ್ನು ಹೊರದೂಡುವ ಜ್ಞಾನದೀವಿಗೆಯಾಗಿ ಶೋಭಿಸುತ್ತಲಿರುವುದು. ಮಾನವ ಸಮಾಜ ಕತ್ತಲೆಯಿಂದ ಬೆಳಕಿಗೆ ಹಾದುಹೋಗುವಾಗ ಜಾತಿಮತಗಳ ಗೊಂದಲಕ್ಕೆಡೆಗೊಡದೆ ಸರ್ವರನ್ನೂ ಆತ್ಮೋನ್ನತಿಯ ದಿವ್ಯ ಪಥದಲ್ಲಿ ಒಯ್ಯುವ ದಿವ್ಯತೇಜೋಮೂರ್ತಿಗಳು ಯುಗಯುಗದಲ್ಲೂ ಅವತರಿಸುತ್ತ ಬಂದಿದ್ದಾರೆ.

**ಯದಾಯದಾಹಿ ಧರ್ಮಸ್ಯ ಹಾನಿಃ ಶೈವಸ್ಯ ಜಾಯತೇ ।**
**ತದಾತದಾವತಾರೋಽಯಂ ಗಣೇಶಾನಾಂ ಮಹೀತಲೇ ॥**

ಶೈವಧರ್ಮ ಪ್ರಸಾರಕ್ಕೆ ಯಾವಾಗ ಹಾನಿ ಸಂಭವಿಸುವುದೋ ಆಯಾ ಕಾಲಗಳಲ್ಲಿ ಈ ಭೂಮಿಯಲ್ಲಿ ಪ್ರಮಥಗಣರು ಅವತರಿಸುವರು ಎಂದು ಶಂಕರ ಸಂಹಿತೆ ಧರ್ಮೋದ್ಧಾರಕ್ಕಾಗಿ ಪ್ರಮಥರು ಆಗಾಗ್ಗೆ ಅವತರಿಸುವರೆಂದು ತಿಳಿಸಿದೆ. ಹಾಗೆ ಅವತರಿಸಿದ ಮಹಾಪುರುಷರೇ ರೇಣುಕಾದ್ಯಾಚಾರ್ಯರೆಂದೂ ಬಸವಾದಿ ಪ್ರಮಥರೆಂದೂ ವಿಶ್ರುತರಾಗಿರುವರು.

'ಪುರಾದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ' ಎಂದು ಸಿದ್ಧಾಂತ ಶಿಖಾಮಣಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬಹಳ ಪ್ರಾಚೀನ ಕಾಲದಲ್ಲಿಯೇ ಪರಶಿವನು ಕೈಲಾಸದಲ್ಲಿ ತನ್ನ ಭಾರ್ಯೆಯಾದ ಭವಾನಿಗೂ, ಮಗನಾದ ಷಣ್ಮುಖನಿಗೂ ಬೋಧಿಸಿದನೆಂದೂ ಅದೇ ತತ್ತ್ವವನ್ನು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಇಲ್ಲಿ ಬೋಧಿಸಿದರೆಂದೂ ತಿಳಿಸುತ್ತದೆ. ಹೀಗೆಯೇ ಲೋಕಕಲ್ಯಾಣಕ್ಕಾಗಿ ಪರಮಾತ್ಮನೇ ಯುಗಯುಗದಲ್ಲಿ ಅವತರಿಸಿ ಮಾನವ ಸಮಾಜವನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯುತ್ತಿರುವನು. ಲೋಕದಲ್ಲಿ ಅಧರ್ಮ ಹೆಚ್ಚಿ ಧರ್ಮಕ್ಕೆ ಗ್ಲಾನಿಯುಂಟಾಗುವುದನ್ನು ಅವನು ಎಂದೆಂದಿಗೂ ಸಹಿಸಲಾರನು. ಹಾಗೆಯೇ ಸಾಧುಗಳು ಸಂತಾಪ ಪಡುವುದನ್ನೂ

ಪಾಪಿಗಳು ದುರಹಂಕಾರದಿಂದ ಮೆರೆಯುವುದನ್ನೂ ಅವನು ಒಪ್ಪಲಾರನು ಜಗತ್ತೆಲ್ಲವೂ ಅವನ ಲೀಲಾರಂಗ ಸ್ಥಳವೇ ಆಗಿರುವುದರಿಂದಲೂ ಪ್ರತಿಯೊಬ್ಬ ಜೀವಿಯೂ ಅವನ ಚೈತನ್ಯದ ನೇರವಾದ ಅಂಶವಾಗಿರುವುದರಿಂದಲೂ ಅವನಿಗೆ ನಮ್ಮ ಮೇಲೆ ಅಪಾರವಾದ ಕರುಣೆಯಿದೆ. ಆದ್ದರಿಂದ ಜಗದ್ರಕ್ಷಣೆಯ ಹೊಣೆಯನ್ನು ಅವನೇ ಹೊತ್ತಿರುವನು. ಇದಕ್ಕಾಗಿ ಕೆಲವು ವೇಳೆ ಅವನೇ ನೇರವಾಗಿ ಅವತರಿಸುವನು. ಇದು ಶೈವ ವೈಷ್ಣವ ಪಂಥಗಳಿಗೆ ಸಹಜವಾಗಿ ಅನ್ವಯಿಸುತ್ತದೆ. ವೀರಶೈವ ಪಂಥದಲ್ಲಾದರೋ ಹಿಂದೆ ತಿಳಿಸಿದಂತೆ ಜ್ಞಾನಪೂರ್ಣ ಪರಂಜ್ಯೋತಿ ಸ್ವರೂಪರಾದ ಪ್ರಮಥ ಗಣಗಳ ಅವತಾರವು ಪ್ರತಿಯೊಂದು ಯುಗದಲ್ಲೂ ಸಹಜವಾಗಿ ಸಂಭವಿಸುತ್ತಲಿರುವುದು.

ರೇಣುಕಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಆಚಾರ್ಯರು ಬಹಳ ಹಿಂದೆಯೇ ಅವತರಿಸಿ ಭಾರತದ ಅನೇಕ ಕಡೆಗಳಲ್ಲಿ ನೆಲೆಸಿ ಧರ್ಮವನ್ನು ಬೋಧಿಸಿರುವರು ಅವರು ಸ್ಥಾಪಿಸಿರುವ ಮಠಗಳು ಈಗಲೂ ಭಕ್ತವೃಂದಕ್ಕೆ ಆದರ್ಶವೂ ಮಾರ್ಗದರ್ಶಕವೂ ಎನಿಸುವಷ್ಟು ಪವಿತ್ರ ಜ್ಞಾನಕೇಂದ್ರಗಳಾಗಿ ಶೋಭಿಸುತ್ತಲಿವೆ. ಈ ಪೀಠಗಳು ರಂಭಾಪುರಿ, ಉಜ್ಜಯಿನಿ ಕೇದಾರ, ಶ್ರೀಶೈಲ, ಕಾಶೀಕ್ಷೇತ್ರಗಳಲ್ಲಿ ಈಗಲೂ ಭಕ್ತರಿಗೆ ಆಕರ್ಷಕವಾಗಿರುವುವು. ವೀರಶೈವ ಮತವು ಮಹಾಭಾರತ ಕಾಲದಲ್ಲಿ ಇದ್ದುದರಿಂದಲೇ ಲಿಂಗಧಾರಿಗಳನ್ನು ದಾನಾರ್ಹರೆಂದೂ ಶಿವಯಜ್ಞ ರೂಪವಾದ ತಪಸ್ಸನ್ನಾಚರಿಸುವರೆಂದೂ ಭೀಷ್ಮನು ಸೂಚಿಸಿದ್ದಾನೆ. ಹೀಗೆಯೇ ರಾಮಾಯಣ ಕಾಲದಲ್ಲಿ ಲಿಂಗಪೂಜೆ ಇದ್ದುದರಿಂದಲೇ ಈ ಮತದ ಪ್ರಾಚೀನತೆಯು ಸ್ಪಷ್ಟಪಡುತ್ತದೆ. ರಾಮನೇ ಲಿಂಗಪೂಜೆ ಮಾಡಿ ಶಿವನ ಅನುಗ್ರಹವನ್ನು ಪಡೆದು ರಾವಣಸಂಹಾರದಿಂದೊದಗಿದ ತನ್ನ ಪಾಪವನ್ನು ಕಳೆದುಕೊಂಡಿರುವನು. ದ್ರಾವಿಡ ಸಂಸ್ಕೃತಿಗೆ ಮೂಲಪುರುಷನಾದ ಅಗಸ್ತ್ಯನಿಗೆ ರೇಣುಕಾಚಾರ್ಯರು ಶಿವದೀಕ್ಷೆಯನ್ನು ಅನುಗ್ರಹಿಸಿ ಶಿವತತ್ತ್ವವನ್ನು ಉಪದೇಶಿಸಿದ್ದರಿಂದ ಸುಮಾರು ಕ್ರಿಸ್ತಪೂರ್ವ ಆರು ಸಾವಿರ ವರ್ಷಗಳ ಹಿಂದೆಯೇ ರೇಣುಕಾಚಾರ್ಯರು ಕಲಿಯುಗದಲ್ಲಿ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಉದ್ಭವಿಸಿ ಅನೇಕ ಕಡೆ ಸಂಚರಿಸಿ ಶಿವತತ್ತ್ವವನ್ನು ಬೋಧಿಸಿರುವರೆಂದು ತಿಳಿದುಬರುತ್ತದೆ. ಅವರು ಇದಕ್ಕೂ ಹಿಂದೆ ತ್ರೇತಾಯುಗದಲ್ಲಿ ವಿಭೀಷಣನ ಪ್ರಾರ್ಥನೆಯಂತೆ ಲಂಕೆಯಲ್ಲಿ ಮೂರು

ಕೋಟಿ ಗುರು ರೂಪಗಳನ್ನು ಧರಿಸಿ ಮೂರು ಕೋಟಿ ಲಿಂಗಗಳನ್ನು ಏಕಕಾಲದಲ್ಲಿ ಸ್ಥಾಪಿಸಿದರೆಂದು ಸಿದ್ಧಾಂತಶಿಖಾಮಣಿ ತಿಳಿಸುತ್ತದೆ. ಸಿಲೋನ್‌ನಲ್ಲಿ ಭೂಗರ್ಭ ಶೋಧನೆಯಿಂದ ಸಿಕ್ಕಿರುವ ಲಿಂಗಗಳು ಹಿಂದೆ ರೇಣುಕರು ಪ್ರತಿಷ್ಠಿಸಿದ ಲಿಂಗಗಳೇ ಆಗಿರಬೇಕೆಂದು ಊಹಿಸಬಹುದಾಗಿದೆ. ಒಟ್ಟಿನಲ್ಲಿ ಆಚಾರ್ಯರು ವೀರಶೈವ ಧರ್ಮವನ್ನು ಭೂಲೋಕದಲ್ಲಿ ಮೊದಲಿಗೆ ಬೋಧಿಸಿದರೆಂಬ ಬಗ್ಗೆ ಯಾವ ಸಂದೇಹಕ್ಕೂ ಎಡೆಯಿಲ್ಲ. ಈ ಬಗ್ಗೆ ಡಾ. ನಂದೀಮಠರು ಹೀಗೆ ಹೇಳುತ್ತಾರೆ. " ಸಂಕ್ಷೇಪವಾಗಿ ಹೇಳುವುದಾದರೆ ಈ ಐದು ಜನ ಆಚಾರ್ಯರು ವೀರಶೈವ ಧರ್ಮವನ್ನು ಮೊದಲು ಬೋಧಿಸಿದರೆಂದು ನಂಬಲಾಗಿದೆ. ಅಂದರೆ ಅವರು ಸಂಪ್ರದಾಯಾನುಸಾರವಾಗಿ ವೀರಶೈವ ಧರ್ಮವನ್ನು ಬೋಧಿಸಿದ ಮೂಲಪುರುಷರಾಗಿರುವರು. ಇವರು ಬೋಧಿಸಿದ ಧರ್ಮವನ್ನು ಬಸವಾದಿ ಶರಣರು ವಿಶೇಷವಾಗಿ ಪ್ರಚಾರಮಾಡಿದ್ದಾರೆ ".

ಇಂಥ ಪರಿಸ್ಥಿತಿಯಲ್ಲಿ ಡಾ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ವೀರಶೈವರ ವೈಶಿಷ್ಟ್ಯಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸಿರುವುದು ತುಂಬ ಆದರ್ಶವೆನಿಸಿದೆ. ಇವರು ಹೇಳುವಂತೆ ಯಾರು ಶೈವಮತ ಸಂರಕ್ಷಣೆಗಾಗಿ ತಮ್ಮ ಪ್ರಾಣವನ್ನೂ ಸಹ ಸಮರ್ಪಿಸಲು ಮುಂದೆ ನುಗ್ಗುವರೋ ಅವರು ಶಿವನ ನಿತ್ಯಾಭಿಯೋಗದಿಂದ ಶಿವಭಕ್ತರೆನಿಸಿ ಶಿವಯಜ್ಞವನ್ನು ಆಚರಿಸುವರೆಂದು ವೀರಪದವು ತಿಳಿಸುತ್ತದೆ. ವೀರಶೈವ ಮತವು ಅಹಿಂಸೆಯನ್ನು ಪ್ರಧಾನವಾಗಿ ಬೋಧಿಸಿದೆಯಾದರೂ, ಶಿವಲಿಂಗಕ್ಕೂ ಶಿವಯೋಗಿಗೂ ದುಷ್ಟರಿಂದ ಹಿಂಸೆಯೊದಗಿದಾಗ ನಪುಂಸಕರಾಗಬಾರದೆಂದೂ, ತಮ್ಮ ಶಕ್ತಿಮೀರಿ ದುಷ್ಟರನ್ನು ನಿಗ್ರಹಿಸಬೇಕೆಂಬ ವೀರವ್ರತದಿಂದ ಶಿವಭಕ್ತನಿಗೆ ವೀರಶೈವನೆಂಬ ಹೆಸರು ಬಂದಿತೆಂದೂ ಶ್ರೀ ಸ್ವಾಮಿಗಳು ಪ್ರಮಾಣಬದ್ಧವಾಗಿ ಪ್ರತಿಪಾದಿಸಿರುವರು. ವೀರಶೈವರು ಲಿಂಗಕ್ಕೆ ಅಧೀನವಾಗಿ ನಿತ್ಯ ವ್ಯವಹಾರವನ್ನು ಲಿಂಗ ಪ್ರೀತ್ಯರ್ಥವಾಗಿಯೇ ನಡೆಸುತ್ತ ಇವರ ಮನಚಿತ್ ಪ್ರಾಣಗಳೆಲ್ಲವೂ ಲಿಂಗಕ್ಕೇ ಅಂಟಿಕೊಂಡಿರುವುದರಿಂದ ಇವರಿಗೆ ವೀರಶೈವ ಹೆಸರಿದೆ. ಶೈವಮತವು ಪ್ರತಿಷ್ಠಿತ ಲಿಂಗದ ಅರ್ಚನವನ್ನು ವಿಧಿಸಿದೆ. ಇದರಿಂದ ದೇಹಕ್ಕೆ ಶಿವನ ನಿತ್ಯ ಸಂಬಂಧ ಉಂಟಾಗಲಾರದೆಂದು ವೀರಶೈವ ಮತವು ಗುರ್ವನುಗ್ರಹೀತವೂ, ಷಟ್‌ಸ್ಥಲಾತ್ಮಕವೂ, ಪ್ರಾಣರೂಪವೂ ಆದ ಇಷ್ಟಲಿಂಗದ ಅರ್ಚನೆಯ ವಿನಾ

ಬೇರೆ ಯಾವ ಮೂರ್ತಿಪೂಜೆಯನ್ನಾಗಲಿ ಪ್ರತಿಷ್ಠಿತಲಿಂಗದ ಅರ್ಚನೆಯನ್ನಾಗಲಿ ಮಾಡಬಾರದೆಂದು ವಿಧಿಸಿದೆ. ದೇವಾಲಯದಲ್ಲಿ ಪ್ರತಿಷ್ಠಿತವಾದ ಸ್ಥಾವರ ಲಿಂಗದ ಆರಾಧನವನ್ನು ಇದು ಒಪ್ಪುವುದಿಲ್ಲ. ಆದರೆ ವೀರಶೈವನು ದೀಕ್ಷಾ ಕಾಲದಲ್ಲಿ ಗುರುವಿನಿಂದ ಪಡೆದ ತನ್ನ ಇಷ್ಟಲಿಂಗದಲ್ಲಿಯೇ ಪರಮಾತ್ಮನನ್ನು ಆರಾಧಿಸಬೇಕೆಂದು ಅದು ಪ್ರತಿಪಾದಿಸುತ್ತದೆ. ವೀರಶೈವರಿಗೆ ಲಿಂಗವೆಂದರೆ ಶಿವನೇ ಆಗಿರುವನಲ್ಲದೆ ಲಿಂಗವು ಶಿವನ ಕೇವಲ ವಿಗ್ರಹವೆಂದಲ್ಲ. ಪರಶಿವನು ದೇಹದಲ್ಲಿ ಚೈತನ್ಯರೂಪದಲ್ಲಿ ವಾಸವಾಗಿದ್ದಾನೆ. ಅವನನ್ನು ಗುರುವು ತನ್ನ ಆತ್ಮ ಶಕ್ತಿಯ ಪ್ರಭಾವದಿಂದ ಲಿಂಗರೂಪದಲ್ಲಿ ಹೊರಗೆ ತಂದು ಶಿಷ್ಯನ ಕೈಗೆ ಅರ್ಚನೆಗಾಗಿ ಕೊಡುವನು. ಈ ಲಿಂಗವು ಶಿಷ್ಯನ ಕೈಯಲ್ಲಿ ಅವನ ಕಣ್ಮನ ಭಾವಗಳಿಗೆ ಒಂದು ದಿವ್ಯ ತೇಜೋನಿಧಿಯಾಗಿ ಶೋಭಿಸುತ್ತಿರುವುದು. ಅದು ಯಾವ ಕಾರಣದಿಂದಲೂ ದೇಹದಿಂದ ವಿಯೋಗ ಹೊಂದಬಾರದು. ಅದರ ವಿಯೋಗವು ಆತ್ಮಶಕ್ತಿಯ ನಾಶಕ್ಕೆ ಸಮವೆನಿಸುವುದು. ಆ ಲಿಂಗದ ವಿನಾ ಬೇರೆ ಯಾವ ಆಕಾರದಲ್ಲೂ ಶಿವನ ಅರ್ಚನೆಯನ್ನು ವೀರಶೈವ ಧರ್ಮವು ಒಪ್ಪುವುದಿಲ್ಲ. ಈ ಬಗೆಯ ನಿಷ್ಠೆಯನ್ನು ಯಾವಜ್ಜೀವವೂ ಆಚರಿಸುವುದೇ ವೀರವ್ರತವೆಂಬು ದನ್ನು ಶ್ರೀ ಸ್ವಾಮಿಗಳು ಪ್ರಮಾಣ ಬದ್ಧವಾಗಿ ಪ್ರತಿಪಾದಿಸಿರುವರು.

ಇಷ್ಟಲಿಂಗಧಾರಿಯೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯಾಗುವನೆಂದು ಶ್ರೀಕರ ಭಾಷ್ಯದ ಪ್ರಮಾಣವನ್ನು ಶ್ರೀಗಳು ಉದಾಹರಿಸಿರುವುದು ಸಮಂಜಸ ವಾಗಿದೆ. ವೀರಶೈವರ ದಾರ್ಶನಿಕ ಸಿದ್ಧಾಂತವನ್ನು ಪೀಠಿಕೆಯಲ್ಲಿ ಹೆಸರಿಸುತ್ತ ಅದನ್ನು ಭೂತಲದಲ್ಲಿ ಸ್ಥಾಪಿಸಿದ ಜಗದ್ಗುರು ಪಂಚಾಚಾರ್ಯರ ಪಂಚ ಪೀಠ ಪರಂಪರೆಯನ್ನು ಶ್ರೀಗಳು ಸೂಕ್ತವಾಗಿ ಆರಂಭಿಸಿರುವರು. ಅವರೈವರಿಗೂ ನಾಲ್ಕು ಯುಗಗಳಲ್ಲೂ ಪ್ರಚಾರದಲ್ಲಿದ್ದ ಹೆಸರುಗಳನ್ನೂ ಅವರ ಉತ್ಪತ್ತಿ ಪ್ರಕಾರಗಳನ್ನೂ ವಿಶದವಾಗಿ ಪ್ರತಿಪಾದಿಸಿರುವರು. ಪ್ರತಿಯೊಂದು ಪೀಠದ ಪರಂಪರೆಯನ್ನು ತಿಳಿಸುತ್ತ ಆ ಪರಂಪರೆಯಲ್ಲಿ ಅಧಿಕಾರಕ್ಕೆ ಬಂದು ಅಂದಿನಿಂದ ಇಂದಿನವರೆಗೂ ಆಗಿರುವ ಜಗದ್ಗುರುಗಳ ಹೆಸರುಗಳನ್ನು ಪ್ರತ್ಯೇಕವಾಗಿ ಸೂಚಿಸಿರುವರು. ಈ ಸಂದರ್ಭದಲ್ಲಿ ಶಿವನಾಗಲಿ ರುದ್ರನಾಗಲಿ ಮತಸ್ಥಾಪಕ ನೆನಿಸದೆ ರೇಣುಕಾದಿ ಆಚಾರ್ಯರೇ ಮೊದಲಿಗೆ ಸಿದ್ಧಾಂತವನ್ನು ಉಪದೇಶಿಸಿದ್ದ ರಿಂದ ಮತಸ್ಥಾಪಕರೆಂದು ಪ್ರಮಾಣಬದ್ಧವಾಗಿ ನಿರೂಪಿಸಿರುವರು. ಐವರು

ಆಚಾರ್ಯರೂ ಲಿಂಗಗಳಿಂದಲೇ ಉದ್ಭವಿಸಿ ತಮ್ಮ ಗುರುಕಾರ್ಯವನ್ನು ನಿರಾತಂಕವಾಗಿ ನೆರವೇರಿಸಿದೊಡನೆಯೇ ತಾವು ಅವೇ ಲಿಂಗಗಳಲ್ಲಿ ಐಕ್ಯರಾದ ರೆಂಬುದನ್ನು ಯಾರಿಗೂ ಯಾವ ಸಂಶಯವೂ ಹುಟ್ಟದಂತೆ ವೈಜ್ಞಾನಿಕವಾಗಿ ಹಾಗೂ ವೈಚಾರಿಕವಾಗಿ ಎಂತಹ ನಾಸ್ತಿಕರಿಗೂ ಒಪ್ಪಿಗೆಯಾಗುವಂತೆ ಪ್ರತಿ ಪಾದಿಸಿರುವರು. ಕೊನೆಯಲ್ಲಿ ವೀರಶೈವರ ಗೋತ್ರಸೂತ್ರಗಳನ್ನು ಎಲ್ಲರಿಗೂ ಮನವರಿಕೆಯಾಗುವಂತೆ ವಿಶದಗೊಳಿಸಿರುವರು.

ಸ್ವಾಮಿಗಳು ಸಮಾಜಕ್ಕೆ ಅರ್ಪಿಸಿರುವ ಈ ಮಹಾಗ್ರಂಥವು ವೀರಶೈವ ಪಂಚಪೀಠ ಪರಂಪರೆಯನ್ನು ಸಪ್ರಮಾಣವಾಗಿ ಪ್ರತಿಪಾದಿಸಿ ಯಾರಿಗೂ ಸಂಶಯ ಹುಟ್ಟದಂತೆ ಎಲ್ಲಠೂ ಪೀಠಾಚಾರ್ಯರನ್ನು ಗೌರವಿಸಿ ಪುರಸ್ಕರಿಸು ವಂತೆ ಸಮಾಜಕ್ಕೆ ಮಹೋಪಕಾರವನ್ನು ಮಾಡಿರುವರು. ಇಂತಹ ಪವಿತ್ರ ಪ್ರಮಾಣಗ್ರಂಥವು ವೀರಶೈವ ಸಿದ್ಧಾಂತದ ಪ್ರಾಧ್ಯಾಪಕರ ಅಮೃತ ಹಸ್ತದಿಂದ ಹೊರಬಂದು ಸಮಾಜದ ಬಂಧುಗಳಿಗೆ ದೊರೆತು ಎಲ್ಲರ ಗಮನವನ್ನೂ ಆತ್ಮ ಜ್ಞಾನ, ಆತ್ಮ ವಿಶ್ವಾಸ, ಆತ್ಮ ಗೌರವಗಳ ಕಡೆಗೆ ಪ್ರಸರಿಸುವಂತೆ ಮಾಡುವು ದೆಂದು ದೃಢವಾಗಿ ಭಾವಿಸಲಾಗಿದೆ. ವೀರಶೈವ ಧರ್ಮತತ್ತ್ವವನ್ನು ತಿಳಿಯ ಲಿಕ್ಕೂ ಆಚರಿಸಲಿಕ್ಕೂ ಎಲ್ಲರಿಗೂ ಸದವಕಾಶವನ್ನು ಸಂತೋಷದಿಂದ ಕಲ್ಪಿಸಿ ಕೊಟ್ಟಿರುವುದರಿಂದಲೇ ವೀರಶೈವಾಚಾರ್ಯರನ್ನು ಜಗದಾಚಾರ್ಯರೆಂದೂ ಜಗದ್ಗುರುಗಳೆಂದೂ ಕರೆಯಲಾಗಿದೆ. ಆಚಾರ್ಯರ ಮತ್ತು ಶರಣರ ಸಾಹಿತ್ಯ ವನ್ನು ಪರ್ಯಾಲೋಚಿಸಿದಾಗ ಅನಾದಿ ಕಾಲದಿಂದಲೂ ವೀರಶೈವರು ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತೆ ಇವನ್ನು ಪಾಲಿಸುತ್ತ ಸರ್ವ ಜೀವರುಗಳನ್ನು ಪ್ರೀತಿಸುವ ಉದಾತ್ತ ಭಾವನೆಯುಳ್ಳವರಾಗಿರುವಂತೆ ಶ್ರೀ ಸ್ವಾಮಿಗಳು ತಿಳಿಸಿ ರುವರು. ವೀರಶೈವರ ಈ ಉದಾತ್ತ ಭಾವನೆಯನ್ನು ಅನ್ಯಧರ್ಮದವರೂ ನಿಷ್ಠೆಯಿಂದ ಪರಿಪಾಲಿಸಿದ್ದೇ ಆದರೆ ಇಂದು ಧರ್ಮದ ಹೆಸರಿನಲ್ಲಿ ನಡೆಯುತ್ತಿ ರುವ ಹಿಂಸಾಚಾರಗಳು ಅಡಗಿ ಜಗತ್ತಿನಲ್ಲಿ ಶಾಂತಿ ನೆಲೆಸುವದರಲ್ಲಿ ಯಾವ ಸಂದೇಹವೂ ಇಲ್ಲ.

"ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡು ಪ್ರಸಂಗ ಬಂದರೆ ಪ್ರಾಣವನ್ನೇ ತೊರೆಯಬಲ್ಲೆನು ಆದರೆ ಇಷ್ಟಲಿಂಗದ ಪೂಜೆಯನ್ನು ಎಂದಿಗೂ ಬಿಡೆನು" ಎಂಬ ನಿಷ್ಠಾಭಕ್ತಿಯಿಂದ ಕೂಡಿದ ವೀರಶೈವನು ಜಗತ್ತಿ

ನಲ್ಲಿ ಯಾರನ್ನು ತಾನೆ ನಿಂದಿಸಿಯಾನು? ಯಾವುದೇ ಪ್ರಾಣಿಯನ್ನಾಗಲಿ ಯಾವುದೇ ಧರ್ಮದವನನ್ನಾಗಲಿ ದ್ವೇಷಿಸದೆ ವೈರಭಾವ ಅಸೂಯೆಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿ ಸರ್ವರೊಡನೆ ಪ್ರೇಮದಿಂದ ವ್ಯವಹರಿಸುವ ಉದಾತ್ತ ಮನೋಭಾವನೆಯನ್ನು ಹುಟ್ಟಿಸುವ ಜಗದಾಚಾರ್ಯರನ್ನು ಯಾರು ತಾನೆ ಗುರುವೆಂದು ಭಾವಿಸಲಾರರು? ಇಂಥವರ ದಿವ್ಯದರ್ಶನದಿಂದ ಯಾವ ಜೀವನು ತಾನೆ ಉದ್ಧಾರವಾಗಲಾರನು? ಬಾಳಿನಲ್ಲಿ ಮಾಯೆಯಿಂದ ಸಂಭವಿಸುವ ಉಪಟಳವನ್ನು ನಿಗ್ರಹಿಸಲು ಯಾರು ತಾನೆ ಮುಂದುವರಿಯಲಾರರು? ಜಗದ್ಗುರುಗಳ ದಿವ್ಯದೃಷ್ಟಿ ಮತ್ತು ಉಪದೇಶಗಳಿಂದ ಯಾರು ತಾನೆ ಪುನೀತರಾಗಲಾರರು? ಸಾಕಾರ ಮೂರ್ತಿಯಾದ ಲಿಂಗದ ನೈಷ್ಠಿಕ ಅರ್ಚನೆಯಿಂದ ನಿರಾಕಾರ ಶಿವತತ್ತ್ವದ ಕೃಪಾಪ್ರಸಾದವನ್ನು ಯಾವ ಸಾಧಕನು ತಾನೆ ಪಡೆಯಲಾರನು? ದೇಹದ ಮೇಲೆ ವ್ಯಾಮೋಹವನ್ನಿರಿಸದೆ ದೇಹದ ಸದುಪಯೋಗದಿಂದಲೇ ತನ್ನ ಜನ್ಮಸಾರ್ಥಕತೆಯನ್ನು ಗುರುಕರುಣೆಯಿಂದ ಯಾರು ತಾನೆ ಪಡೆಯಲಾರರು? ಉನ್ನತವಾದ ಸ್ಥಾನಮಾನಗಳು ಜಗತ್ತಿನಲ್ಲಿ ಧರ್ಮದಿಂದಲೇ ದೊರಕಬೇಕಾಗಿವೆ. ಆ ಧರ್ಮದ ನೈಜಸ್ವರೂಪವು ನಿಗಮಾಗಮಗಳಿಂದಲೇ ಮಾನವನಿಗೆ ದೊರಕಬೇಕಾಗಿದೆ. ಆದರೆ ಅವುಗಳ ಅರ್ಥ ವಿವರಣೆಯು ಜಗದ್ಗುರುಗಳಿಂದಲೇ ಆಗಬೇಕಾಗಿರುವುದರಿಂದ ನಾವು ಜಗದ್ಗುರುಗಳ ಕರುಣ ಪ್ರಸಾದಗಳಿಗೆ ಸತ್ಪಾತ್ರರಾಗಲೇಬೇಕಾಗಿದೆ. ಅಂತಹ ಗುರುಗಳ ಕರುಣೆಯಿಂದಲೇ ನಮ್ಮ ಆತ್ಮಕಲ್ಯಾಣವೂ ಕೈವಲ್ಯಸ್ಥಿತಿಯೂ ನಮಗೆ ಲಭಿಸಬೇಕಾಗಿವೆ.

'ವೀರಶೈವ ಪಂಚಪೀಠ ಪರಂಪರೆ'ಯು ನಮ್ಮೆಲ್ಲರ ಜ್ಞಾನನೇತ್ರವನ್ನು ತೆರೆಯಿಸಿ ಭಕ್ತಿ ಗೌರವಗಳಿಂದ ಗುರುವನ್ನು ಆದರಿಸಿ, ಉಪಚರಿಸಿ ಅವರ ದಿವ್ಯ ದೃಷ್ಟಿಗೆ ನಮ್ಮೆಲ್ಲರನ್ನೂ ಸತ್ಪಾತ್ರರನ್ನಾಗಿ ಮಾಡಲು ಸಮರ್ಥವೆನಿಸಿದೆ. ಇಂತಹ ಪವಿತ್ರ ಗ್ರಂಥವು ಇನ್ನೂ ಹಿಂದೆಯೇ ಪ್ರಕಟವಾಗಿದ್ದರೆ ಈ ವೇಳೆಗೆ ಈ ಭೂಮಿಯೇ ಪುಣ್ಯಕ್ಷೇತ್ರವಾಗಿ ಪರಿಣಮಿಸುತ್ತಿತ್ತು. ಭೂಮಿಯೆಲ್ಲವೂ ಈಶಾವಾಸ್ಯ, ಅಂದರೆ ಈಶ್ವರನ ವಸತಿಗೃಹ, ಎಂಬ ಅರಿವು ನಮ್ಮೆಲ್ಲರಿಗೂ ಆಗುತ್ತಿತ್ತು, ಇಷ್ಟೇ ಅಲ್ಲದೆ ಎಲ್ಲರೂ ಸತ್ಯಶುದ್ಧ ಕಾಯಕದಲ್ಲಿ ನಿರತರಾಗಿ ಕಾಯಕದ ಬಗ್ಗೆ ರೇಣುಕಾಚಾರ್ಯರು ತಿಳಿಸಿದಂತೆ 'ವೃತ್ತಿಃ ಚೈತನ್ಯ

ರೂಪಿಣೀ' ಎಂಬ ದಿವ್ಯೋಪದೇಶದ ಅರಿವು ಲಭಿಸಿ ಭಾರತ ಭೂಮಿ ಸದ್ಗೃಹ ಸ್ಥರ ನೆಲೆವೀಡಾಗುತ್ತಿತ್ತು. ಈ ಗ್ರಂಥವನ್ನು ಓದಿದವರೆಲ್ಲರೂ ಎಲ್ಲರೂ ತಮ್ಮ ತಮ್ಮ ವೃತ್ತಿಯನ್ನು ಭಗವದ್ಭಾವನೆಯಿಂದ ಗೌರವಿಸುತ್ತ ಭಾರತದೇಶ ವನ್ನು ಧರ್ಮದ ನಾಡಾಗುವಂತೆ ಮಾರ್ಪಡಿಸುವರೆಂದು ನಂಬಲಾಗಿದೆ. ಮಾನವರಲ್ಲಿ ಸ್ವಾರ್ಥತೆಯು ಕಿಲುಬು ಕಳೆದು ಮನದ ದುಗುಡವು ತೊಲಗಿ ನಿಸ್ಸ್ವಾರ್ಥತೆ, ಪರಹಿತ ಚಿಂತನೆ, ಸೇವಾಮನೋಭಾವ, ತ್ಯಾಗಬುದ್ಧಿ, ಉದಾರ ದೃಷ್ಟಿ ಇಂತಹ ದಿವ್ಯ ಆದರ್ಶಗಳನ್ನು ಈ ಗ್ರಂಥವು ಎಲ್ಲರಿಗೂ ದೊರಕಿಸುವುದೆಂದು ಭಾವಿಸಲಾಗಿದೆ.

ಇವತ್ತಿಗೂ ಮಂಗಳಕಾರ್ಯಗಳನ್ನು ನೆರವೇರಿಸುವಾಗ ಪಂಚಕಲಶ ಸ್ಥಾಪನ ಪೂರ್ವಕವಾಗಿ ಪಂಚಾಚಾರ್ಯರನ್ನು ಭಕ್ತಿಗೌರವಗಳಿಂದ ಸ್ಮರಿಸಿ ಅವರ ಅನುಗ್ರಹ ವನ್ನು ಪಡೆಯುವ ಪದ್ಧತಿ ಎಲ್ಲೆಲ್ಲೂ ರೂಢಿಯಲ್ಲಿದೆ. ಅವರನ್ನು ಸನ್ಮಾನಿಸು ವಂತೆಯೇ ಅವರ ದಿವ್ಯೋಪದೇಶವನ್ನು ಕೇಳಿ ಸದ್ಭಕ್ತರೂ, ಸದ್ಗೃಹಸ್ಥರೂ ಸತ್ಪ್ರಜೆಗಳೂ ಆಗುವಂತೆ ಸರ್ವರೂ ಪ್ರಯತ್ನಿಸುವುದು ಅತ್ಯಾವಶ್ಯಕ. ಆದ್ದ ರಿಂದಲೇ ವೀರಶೈವಧರ್ಮವು ಕಲ್ಪವೃಕ್ಷದಂತೆ ಸರ್ವಾದರಣೀಯವೂ ಸನ್ಮಾರ್ಗ ದರ್ಶಕವೂ ಆಗಿ ಶೋಭಿಸುತ್ತಲಿರುವುದು. ಶಿವನ ನಿತ್ಯಸಂಪರ್ಕದಿಂದಲೇ ಶಿವನ ನೈಜಸ್ವರೂಪವನ್ನು ಅರಿಯುವ ಆವಶ್ಯಕತೆಯಿರುವುದರಿಂದ ಶಿವನನ್ನು ಧಾರಣಮಾಡಿ ಮನಸ್ಸಿನ ಕೊಳೆಯನ್ನು ತೊಳೆದುಕೊಂಡು ನಿರ್ಮಲವಾದ ಮನದಲ್ಲಿ ಪ್ರಸನ್ನನಾಗುವ ಈಶ್ವರನ ಕೃಪೆಗೆ ಎಲ್ಲರೂ ಪಾತ್ರ ರಾಗಬಹುದಾಗಿದೆ. ಅಹಂಕಾರ ವ್ಯಾಮೋಹಗಳೆರಡನ್ನು ಹೃದಯದಿಂದ ದೂರಮಾಡುವುದೇ ಗುರುಕೃಪೆಯ ದಿವ್ಯ ಫಲ. ಇದು ದೊರಕಿದೊಡನೆಯೇ ಶಿವನು ನಮ್ಮ ಯೋಗಕ್ಷೇಮವನ್ನು ವಹಿಸಿಕೊಳ್ಳುವನು. ಶಿವನ ಪ್ರಸಾದ ನಮಗೆ ದೊರೆತೊಡನೆಯೇ ಎಲ್ಲಾ ಬಗೆಯ ದುಃಖ ದುಮ್ಮಾನಗಳೂ ತೊಲಗುವುವು. ಶಿವನ ನಿರಂತರ ಚಿಂತನದಿಂದ ಪಾಪಗಳೆಲ್ಲವನ್ನೂ ಕಳೆದು ಕೊಂಡು ಜೀವನು ಶಿವನಾಗುವುದು ನಿಶ್ಚಯ. ಇದು ಗುರುಕರುಣೆಯಿಂದಲೇ ನಮಗೆ ದೊರೆಯಬಹುದಾದ್ದರಿಂದ ಇಂಥ ಸದ್ಗ್ರಂಥಗಳನ್ನು ಪದೇ ಪದೇ ನೋಡಿ ಮನನ ಮಾಡಿ ಸದ್ಗುರುಗಳನ್ನು ಗೌರವಿಸುವುದೊಂದೇ ನಮ್ಮ ಪಾಲಿನ ಕರ್ತವ್ಯ. ಮುಂದಿನ ಕಾರ್ಯವನ್ನು ಸರ್ವವ್ಯಾಪಿಯೂ ಸರ್ವ

ಸಾಕ್ಷಿಯೂ ಆದ ಮಹಾದೇವನೇ ನೋಡಿಕೊಳ್ಳುವನು. ಇಂತಹ ದಿವ್ಯ ಜೀವನವನ್ನು ಈ ಸದ್ಗ್ರಂಥವು ಮಾನವರೆಲ್ಲರಿಗೂ ದೊರಕಿಸುವುದೆಂದೂ, ಇದಕ್ಕಾಗಿ ಸಂಪೂರ್ಣ ಸಹಕಾರ ಸೌಹಾರ್ದ ಚಾರಿತ್ರ್ಯಶುದ್ಧಿ ಇವು ಎಲ್ಲ ರಲ್ಲೂ ಬೆಳಗಲೆಂದೂ ಸಂತೋಷದಿಂದ ಹಾರೈಸಲಾಗಿದೆ.

ಶ್ರೀ ಸ್ವಾಮಿಗಳು ಘನ ವಿದ್ವಾಂಸರೂ, ಪೂರ್ಣ ಪಂಡಿತರೂ, ಶಿವಾನು ಭವಿಗಳೂ, ಪ್ರವಚನ ಪಟುವೂ, ನಿರ್ಮಲ ಹೃದಯರೂ, ದಯಾಮಯರೂ ಆಗಿದ್ದು ವೀರಶೈವ ಪಂಚಪೀಠ ಪರಂಪರೆಯನ್ನು ಸಾಕಷ್ಟು ಅನುಭವಗಳ ಆಧಾರದಮೇಲೆ ಚಿತ್ರಿಸಿರುವರು. ಆಚಾರ್ಯರಿಗೆ ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಬೇರೆ ಬೇರೆ ಹೆಸರಿದ್ದರೂ ಒಬ್ಬೊಬ್ಬ ವ್ಯಕ್ತಿಯೇ ಪ್ರತಿ ಯುಗದಲ್ಲೂ ಆಯಾ ಲಿಂಗಗಳಿಂದಲೇ ಅವತರಿಸಿ ಲೋಕಕಲ್ಯಾಣವನ್ನು ಸಾಧಿಸಿ ಕಾರ್ಯ ಮುಗಿದೊಡನೆ ಆ ಲಿಂಗದಲ್ಲಿಯೇ ಐಕ್ಯವಾದ್ದರಿಂದ ಅವರ ಸನಾತನ ಪರಂಪರೆಗೆ ಯಾವ ಚ್ಯುತಿಯೂ ಸಂಭವಿಸಲಾರದು. ಲಿಂಗದಿಂದ ಅವರು ಹೇಗೆ ಅವತರಿಸಬಲ್ಲರೆಂದು ಸಂಶಯಪಡಲಿಕ್ಕೆ ಯಾರಿಗೂ ಶ್ರೀಸ್ವಾಮಿ ಗಳು ಅವಕಾಶವನ್ನೇ ಕೊಟ್ಟಿಲ್ಲ. ಪ್ರಹ್ಲಾದನನ್ನು ರಕ್ಷಿಸಲು ಭಕ್ತೈಕಬಂಧು ವಾದ ನಾರಾಯಣನು ಗೋಡೆಯಲ್ಲಿಯೇ ಪ್ರತ್ಯಕ್ಷನಾದದ್ದನ್ನು ಯಾರೂ ಸಂಶಯಪಡುವುದಿಲ್ಲ. ವಿಧಿ ನಿಯಮದಂತೆ ಸಂಭವಿಸಿದ ಹಿರಣ್ಯಕಶ್ಯಪನ ವಿಚಿತ್ರ ವಧೆಯ ಕ್ರಮವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪ್ರಪಂಚದ ಕಾರ್ಯಗಳೆಲ್ಲವೂ ನಿರಾಕಾರ ಶಿವನ ಕಟ್ಟಳೆಯಂತೆಯೇ ನಿರಾತಂಕವಾಗಿ ನೆರ ವೇರುತ್ತಿರುವಾಗ ಪಂಚಾಚಾರ್ಯರು ಶಿವನಿಚ್ಛೆಯಂತೆ ತಮ್ಮ ಹಿಂದಿನ ಜ್ಞಾನಶಕ್ತಿ ಪ್ರಕಾಶಗಳನ್ನು ಉಳಿಸಿಕೊಂಡು ಲಿಂಗಮುಖದಿಂದ ಬಂದು ತಮ್ಮ ಪರಿಪೂರ್ಣತೆಯನ್ನು ಇಲ್ಲಿಯ ಸಭ್ಯ ಸಾಮಾನ್ಯ ಜನತೆಗೆ ಸಂತೋಷದಿಂದ ನೀಡಿ ಕಾರ್ಯ ಮುಗಿದೊಡನೆ ತಾವು ಬಂದ ದಾರಿ ಹಿಡಿದು ಹೊರಟಿರುವುದರಲ್ಲಿ ಯಾವ ಆಶ್ಚರ್ಯವೂ ಇರಲಾರದು. ಅವರು ಕೈಲಾಸದಿಂದ ಇಲ್ಲಿಗೆ ಬರು ವಾಗಲೇ ಪರಿಪೂರ್ಣರೂ ಸ್ವತಂತ್ರರೂ ಆಗಿದ್ದುದರಿಂದ ಯಾವ ಗುರುವನ್ನೂ ಇಲ್ಲಿ ಆಶ್ರಯಿಸುವ ಆವಶ್ಯಕತೆ ಅವರಿಗೆ ಒದಗಲಿಲ್ಲ. ಶಿವನ ಆಜ್ಞೆಯಂತೆ ಲೋಕ ಕಲ್ಯಾಣವನ್ನು ಸಾಧಿಸುವುದೊಂದೇ ಮಾರ್ಗ ಅವರ ಪಾಲಿಗೆ ಇಲ್ಲಿ ಉಳಿದಿತ್ತು. ಅದನ್ನು ಅವರು ಸಂತೋಷದಿಂದ ನಿರ್ವಹಿಸಿ ಶಿವನ ಕೃಪೆಗೆ ಪೂರ್ಣ ಪಾತ್ರ

ರಾದರೆಂಬುದನ್ನು ಶ್ರೀಸ್ವಾಮಿಗಳು ತಮ್ಮ ಪವಿತ್ರ ಗ್ರಂಥದಲ್ಲಿ ಸಪ್ರಮಾಣವಾಗಿ ನೆಲೆಗೊಳಿಸಿರುವರು. ಶಿವನ ಇಚ್ಛೆಯಂತೆ ಇಲ್ಲಿಗೆ ಬಂದ ಶರಣರೆಲ್ಲರೂ ಸಹ ನಿರಂಜನ ಗಣಾಧೀಶ್ವರರ ಅಂಶವೇ ಆಗಿದ್ದು ತಮ್ಮ ಭಾಗದ ಸೇವೆಯನ್ನು ಇಲ್ಲಿ ಅರ್ಪಿಸಿ ಧನ್ಯರಾಗಿ ತಮ್ಮ ಸಂದೇಶವನ್ನು ಆಚಾರ್ಯರಂತೆಯೇ ಎಲ್ಲರಿಗೂ ನೀಡಿರುವರು. ಹಾಗೆ ಎಲ್ಲಾ ಆಚಾರ್ಯರ ಮತ್ತು ಶರಣರ ದಿವ್ಯಸಂದೇಶ ಗಳನ್ನು ಚೆನ್ನಾಗಿ ತಿಳಿದು ಅದರಂತೆ ಆಚರಿಸುತ್ತ ಬಾಳಿನಲ್ಲಿ ಹೊಸ ಬೆಳಕನ್ನು ಪಡೆದು ವಿಶ್ವಭ್ರಾತೃತ್ವವನ್ನು ಸಂಪಾದಿಸಿ ಪರಸ್ಪರ ಮೈತ್ರಿ ಸೌಹಾರ್ದ ಸಹಕಾರ ಮನೋಭಾವಗಳನ್ನು ಎಲ್ಲರೂ ಸಾಧಿಸಿಕೊಂಡು ನೆಮ್ಮದಿಯಿಂದ ಬಾಳಿದರೆ ಶ್ರೀ ಚಂದ್ರಶೇಖರಶಿವಾಚಾರ್ಯ ಸ್ವಾಮಿಗಳ ದಿವ್ಯದೃಷ್ಟಿ ಮತ್ತು ಸತ್ಸಸಂಕಲ್ಪ ಸಫಲವಾಗುವುದರಲ್ಲಿ ಯಾವ ಸಂದೇಹವೂ ಇರಲಾರದು. "ಸುಜನಗೆ ಮಂಗಳ, ಕುಜನಗೆ ಮಂಗಳ, ಸರ್ವರಿಗಾಗಲಿ ಮಂಗಳ" ಎಂಬ ಸೊಳ್ಳುಡಿಯ ದೈವೀವಾಣಿಯಿಂದ ಈ ಮುನ್ನುಡಿಯನ್ನು ಮಂಗಲ ಗೊಳಿಸಲಾಗಿದೆ.

ಸರ್ವೇ ಭದ್ರಾಣಿ ಪಶ್ಯಂತು ಸರ್ವೇ ಸಂತು ನಿರಾಮಯಾಃ ।
ಸರ್ವೇ ಚ ಸುಖಿನಃ ಸಂತು ಮಾ ಕಶ್ಚಿತ್ ದುಃಖಭಾಕ್ ಭವೇತ್ ॥

ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ,
ಯುಜಿಸಿ. ಸಂಸ್ಕೃತ ಪ್ರಾಧ್ಯಾಪಕ (ನಿವೃತ್ತ)

ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ,
ಮೈಸೂರು–4.

606, ಶಂಕರಮಠದ ಬೀದಿ,
ಚಾಮರಾಜ ಜೋಡಿ ರಸ್ತೆ,
ಮೈಸೂರು.

# ಲೇಖಕರ ನುಡಿ

ಭಾರತದೇಶವು ಧರ್ಮ-ದರ್ಶನಗಳ ತವರು ಮನೆ. ಇಲ್ಲಿಯ ಸನಾತನ ಧರ್ಮಗಳಲ್ಲಿ "ವೀರಶೈವ"ಕ್ಕೆ ಪ್ರಮುಖಸ್ಥಾನವಿದೆ ಅಂತೆಯೇ "ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ" ಎಂದಿದೆ ಪಾರಮೇಶ್ವರಾಗಮವು. ಇದಕ್ಕೆ ಇವರಲ್ಲಿರುವ "ವೀರವ್ರತ"ವೇ ಕಾರಣವಾಗಿದೆ ಇಷ್ಟಲಿಂಗ ಪೂಜೆ ಮುಂತಾದ ವ್ರತಗಳನ್ನು ಬಹು ಕಟ್ಟುನಿಟ್ಟಾಗಿ ಪರಿಪಾಲಿಸುವ ಧರ್ಮವಿದು.

ವೀರಶೈವ ಶಬ್ದದಿಂದ ಹೊರಡಬಹುದಾದ ಅನೇಕ ಅರ್ಥಗಳನ್ನು ನಾನಾ ಗ್ರಂಥಗಳ ಸಹಾಯದಿಂದ ಇಲ್ಲಿ ಪ್ರಸ್ತುತಪಡಿಸಲಾಗಿದೆ. ಅದರಂತೆ ಈ ಧರ್ಮದ ಮೂಲ ಸಂಸ್ಥಾಪಕರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಹಾಗೂ ಇಂದಿನವರೆಗೆ ನಡೆದು ಬಂದ ಪಂಚಪೀಠಗಳ ಆಚಾರ್ಯರ ಪರಂಪರೆಯನ್ನು ಆಗಮ ಮತ್ತು ಐತಿಹಾಸಿಕ ಪ್ರಮಾಣಗಳಿಂದ ಯಥಾಶಕ್ತಿ ಪ್ರತಿಪಾದಿಸಲಾಗಿದೆ.

ಈ ಗ್ರಂಥ ನಿರ್ಮಾಣದಲ್ಲಿ ಅನೇಕ ಗ್ರಂಥಗಳ ಋಣವನ್ನು ಪಡೆಯಲಾಗಿದ್ದು ಅವುಗಳ ಉಲ್ಲೇಖವನ್ನು ಗ್ರಂಥದ ಕೊನೆಯ ಭಾಗದಲ್ಲಿ ಪ್ರಕಟಿಸಿರುತ್ತೇವೆ. ಇನ್ನು ವಿಶೇಷವಾಗಿ ನವಲಗುಂದ ಶ್ರೀ ಶಂಕರ ಆರ್ಟ್ಸ ಕಾಲೇಜಿನ ಸಂಸ್ಥಾಪಕರಾದ "ಆಯುರ್ವೇದ ವಿಶಾರದ" "ಆಯುರ್ವೇದಾಚಾರ್ಯ" ಶ್ರೀ. ಷ.ಬ್ರ ಗುರುದೇವ ಶಿವಾಚಾರ್ಯರು ಬೃಹನ್ಮಠ ಚಿಕ್ಕಮಣ್ಣೂರು ಇವರು ಬರೆದ ಶ್ರೀ ಜಗದ್ಗುರು ಪಂಚಪೀಠಗಳ ಇತಿಹಾಸ ಎಂಬ ಕೈಬರಹದ ಪ್ರತಿಯಿಂದ ಅನೇಕ ಐತಿಹಾಸಿಕ ದಾಖಲೆಗಳು ದೊರೆತಿರುತ್ತವೆ. ಈ ಹಸ್ತಪ್ರತಿಯನ್ನು ಒದಗಿಸಿಕೊಡುವಲ್ಲಿ ಗುರುಭಕ್ತಿ ಪರಾಯಣರೂ ದೇಶದ ಹಿತಚಿಂತಕರೂ ಸದಾ. ಸಂಶೋಧನಾಸಕ್ತರೂ ಆದ ವಿಶ್ವಾರಾಧ್ಯ ಗುರುಕುಲದ ಶ್ರೀ ಪಂ. ಚಂದ್ರಹಾಸ ಕೃಷ್ಣಪ್ಪಾ ಕರೂರ ಅಂತರವಳ್ಳಿ (ಜಿ. ಧಾರವಾಡ) ಇವರು ಬಹಳಷ್ಟು ನೆರವಾಗಿದ್ದಾರೆ.

ವೀರಶೈವ ಪಂಚ ಪೀಠಗಳು ಅತ್ಯಂತ ಪುರಾತನಗಳಾಗಿದ್ದರೂ ಈ ಪರಂಪರೆಯಲ್ಲಿ ಆಗಿಹೋದ ಆಚಾರ್ಯರೆಲ್ಲರ ಜೀವನ ಚರಿತ್ರೆ ಹಾಗೂ ಅವರು ಸಾಧಿಸಿದ ಮಹತ್ಕಾರ್ಯಗಳನ್ನು ಬರೆದಿಡುವ ಪದ್ಧತಿಯು ಅತಿ ಪ್ರಾಚೀನ

ಕಾಲದಿಂದ ಅವ್ಯಾಹತವಾಗಿ ಸಾಗಿಬಾರದ್ದರಿಂದ ಇಂದಿನ ಲೇಖಕರು ಬಹಳಷ್ಟು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಈ ಗ್ರಂಥದಲ್ಲಿ ದೊರೆತಷ್ಟು ಐತಿಹಾಸಿಕ ದಾಖಲೆಗಳನ್ನು ಪ್ರಸ್ತುತಪಡಿಸಲಾಗಿದೆ.

ಬಹಳಷ್ಟು ಜನ ವೀರಶೈವರಿಗೆ ತಮ್ಮ ತಮ್ಮ ಗೋತ್ರಸೂತ್ರಗಳ ಅರಿವೇ ಇಲ್ಲದಂತಾಗಿದೆ. ಪೂಜಾದಿ ವ್ಯವಹಾರಗಳಲ್ಲಿ ಮತ್ತು ಲಗ್ನ ಮುಂತಾದ ಮಂಗಲ ಕಾರ್ಯಗಳಲ್ಲಿ ತಮ್ಮ ಗೋತ್ರ–ಪುರುಷರ ಹೆಸರುಗಳನ್ನು ಹೇಳುವದು ಪರಮಾವಶ್ಯಕವು. ಅಂತೆಯೇ ಈ ಗ್ರಂಥದಲ್ಲಿ ವೀರ–ನಂದಿ–ಭೃಂಗಿ–ವೃಷಭ ಮತ್ತು ಸ್ಕಂದರೆಂಬ ವೀರಶೈವ ಪಂಚಗೋತ್ರಪುರುಷರ ಪ್ರಾದುರ್ಭಾವ ಚರಿತ್ರೆಯನ್ನು ಪ್ರಕಟಿಸಲಾಗಿದೆಯಲ್ಲದೇ ಅವರ ಭಾವಚಿತ್ರಗಳನ್ನು ಪ್ರಸಿದ್ಧಿಸಲಾಗಿದೆ.

ವೀರಶೈವರ ಐತಿಹಾಸಿಕ ವಿಷಯವನ್ನೊಳಗೊಂಡ ಈ ಚಿಕ್ಕಗ್ರಂಥವು ಅಧ್ಯಯನ ಶೀಲರಾದ ಧರ್ಮಾಭಿಮಾನಿಗಳಿಗೆ ಹೆಚ್ಚಿನ ನೆರವು ನೀಡಬಹುದೆಂದು ಆಶಿಸುತ್ತೇವೆ.

ರಾಣೇಬೆನ್ನೂರ R.T.E.S ಕಾಲೇಜಿನ ಮನೋವಿಜ್ಞಾನದ ವಿಭಾಗಾಧ್ಯಕ್ಷರಾದ ಪ್ರೊ॥ ಅ. ಸಿ. ಹಿರೇಮಠರು ಈ ಗ್ರಂಥರಚನೆಗೆ ವಿನಂತಿಸಿಕೊಂಡರಲ್ಲದೇ ಹೊನ್ನಾಳಿ ಹಿರೇಕಲ್ಮಠದ ಶ್ರೀ ಚೆನ್ನಚೇತನ ಪ್ರಕಾಶನದಿಂದ ಮುದ್ರಿಸುವ ಹೊಣೆಯನ್ನು ಹೊತ್ತು ಆ ಕಾರ್ಯವನ್ನು ಜವಾಬ್ದಾರಿಯಿಂದ ಪೂರ್ಣಗೊಳಿಸಿದ್ದಾರೆ.

ಈ ಗ್ರಂಥದ ಮುದ್ರಣ ಸಂಶೋಧನೆಯ ಕಾರ್ಯವನ್ನು ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಅಲಂಕಾರ ಪ್ರಾಧ್ಯಾಪಕರಾದ ವಿದ್ವಾನ್ ಬ. ರಾಜಶೇಖರಯ್ಯನವರು ನಿಷ್ಠಾಪೂರ್ವಕವಾಗಿ ನಿರ್ವಹಿಸಿದ್ದಾರೆ.

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನ ಮಾಲಿಕರಾದ ಶ್ರೀ. ಬಿ. ಎಂ. ಸಿದ್ಧೇಶ್ವರಯ್ಯನವರು ಹಾಗೂ ಪ್ರೆಸ್ಸಿನ ಸಿಬ್ಬಂದಿ ವರ್ಗದವರು ಸಮಯಾನುಸಾರವಾಗಿ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿದ್ದಾರೆ ಇವರೆಲ್ಲರಿಗೂ ಜಗದಾಚಾರ್ಯರು ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕಾಪಾಡಲಿ.

ಶ್ರೀಕ್ಷೇತ್ರ ಕಾಶಿ — ಡಾ. ಚಂದ್ರಶೇಖರ ಶಿವಾಚಾರ್ಯ

ದಿ॥ ೨೫–೧–೧೯೮೮ — ರೀಸರ್ಚ ಎಸೋಸಿಏಟ ವೇದಾಂತ ವಿಭಾಗ

ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ.

## ಗ್ರಂಥ ಪ್ರಕಟನೆಗೆ ಉದಾರ ನೆರವು ನೀಡಿದ ಸಹೃದಯಿಗಳು

### ಶ್ರೀ ಬಸವೇಶ್ವರ ಸೇವಾಸಕ್ತ ಮಂಡಳಿ, ದೊಡ್ಡಪೇಟೆ ರಾಣೇಬೆನ್ನೂರು

ಕರ್ನಾಟಕದ ಕೆಲವೇ ಸುಪ್ರಸಿದ್ಧ ವಾಣಿಜ್ಯ ನಗರಗಳಲ್ಲಿ ರಾಣೇಬೆನ್ನೂರು ನಗರವೂ ಒಂದಾಗಿದೆ. ಧಾರವಾಡ ಜಿಲ್ಲೆಯ ಪ್ರಮುಖ ಹಾಗೂ ದೊಡ್ಡ ನಗರಗಳಲ್ಲೊಂದಾದ ಇದು ನೆರೆಹೊರೆಯ ಜಿಲ್ಲೆಗಳ ಕೃಷಿಕರನ್ನು, ವರ್ತಕರನ್ನು ತನ್ನ ವ್ಯಾಪಾರೀ ನೈಪುಣ್ಯತೆಯಿಂದ ಆಕರ್ಷಿಸಿದೆ. ಸುಮಾರು ಎಪ್ಪತ್ತು ಸಾವಿರಕ್ಕೆ ಮೀರಿದ ಜನಸಂಖ್ಯೆಯುಳ್ಳ ಈ ನಗರವು ಅನೇಕ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿದೆ. ಅಂಥ ನಗರದಲ್ಲಿ ದೊಡ್ಡಪೇಟೆಗೆ ತನ್ನದೇ ಆದ ವಿಶಿಷ್ಟ ಸ್ಥಾನಮಾನವುಂಟು ಹಳೆಯ ಸಂಪ್ರದಾಯದ ಬೀಡು ಇದಾಗಿದ್ದರೂ ಒಳ್ಳೆಯ ಉದಾತ್ತ ವಿಚಾರಗಳನ್ನು ಸ್ವಾಗತಿಸುವ ಮನೋಭಾವವುಳ್ಳ ಜನ ಇಲ್ಲಿ ವಾಸವಾಗಿದ್ದಾರೆ.

ಈ ನಗರವು ಏಳು ಗ್ರಾಮಗಳಿಂದ ಕೂಡಿ ನಿರ್ಮಾಣವಾದ ಬೃಹತ್ ನಗರವಾಗಿದೆ. ಈ ದೊಡ್ಡಪೇಟೆಯನ್ನು ಒಳಗೊಂಡ ಭಾಗವು ಶತಮಾನದ ಹಿಂದೆ 'ಕರೀಮಪುರ' ವಾಗಿತ್ತೆಂದು ಹೇಳುತ್ತಾರೆ. ಈ ದೊಡ್ಡಪೇಟೆಯ ಆರಾಧ್ಯ ದೇವತೆ ಶ್ರೀ ಬಸವಣ್ಣ ದೇವರು ಎಂದರೆ ತಪ್ಪಾಗದು. ವ್ಯಾಪಾರದ ಪಡುಮೂಲೆಯ ಸ್ಥಳವೂ ಆಗಿದ್ದ ಈ ಪೇಟೆಯು ಭಕ್ತಿಯ ಬೀಡೂ ಆಗಿದೆ. ಅಂತೆಯೇ ಮಠ ಮಂದಿರಗಳು ಮಸೀದಿಗಳು ಇಂದೂ ಸಹ ಜೀವಂತವಾಗಿದ್ದು, ಧಾರ್ಮಿಕ ಪರಂಪರೆಗಳನ್ನು ಚಾಚೂ ತಪ್ಪದೇ ಮುಂದುವರಿಸಿಕೊಂಡು ಬಂದಿವೆ ಅಂಥವುಗಳಲ್ಲಿ ಶ್ರೀ ಬಸವಣ್ಣದೇವರ ದೇವಸ್ಥಾನವೂ ಒಂದಾಗಿದೆ.

ದೊಡ್ಡಪೇಟೆಯ ಹಿಂದೂ ಬಂಧುಗಳೆಲ್ಲ ಈಗಿರುವ ದೇವಸ್ಥಾನವನ್ನು ಕೆಲವು ದಶಕಗಳ ಹಿಂದೆ ಕಟ್ಟಿಸಿದರು. ಮಂದಿರವು ಗರ್ಭಗುಡಿ, ಸಭಾಂಗಣ, ಮುಖಮಂಟಪ ಹೀಗೆ ಮೂರು ಭಾಗಗಳಲ್ಲಿ ನಿರ್ಮಾಣವಾಗಿದೆ. ಗರ್ಭಗುಡಿಯಲ್ಲಿ ಶಿವಲಿಂಗವನ್ನು, ಮುಂದುಗಡೆ ಸಭಾಂಗಣದಲ್ಲಿ ನಂದಿ (ಬಸವಣ್ಣ) ಮೂರ್ತಿಯನ್ನು ಪ್ರತಿಷ್ಠಾಪಿಸುವದು ಅಂದಿನ ಹಿರಿಯರ ಗುರಿಯಾಗಿತ್ತು. ಆದರೆ

ಸಕಾಲಕ್ಕೆ ಶಿವಲಿಂಗಮೂರ್ತಿ ಸಿದ್ಧವಾಗದ್ದರಿಂದ ಸುಂದರವಾದ ನಂದಿಮೂರ್ತಿ ಸಿದ್ಧವಾದ್ದರಿಂದ ಶುಭಮುಹೂರ್ತದಲ್ಲಿ ನಂದಿ ವಿಗ್ರಹವನ್ನೇ ಪೂರ್ವಾಭಿಮುಖವಾಗಿ ಗರ್ಭಗುಡಿಯಲ್ಲಿಯೇ ಪ್ರತಿಷ್ಠಾಪಿಸಲು ಪಟ್ಟು ಹಿಡಿದರು. ಬಹು ಜನರ ಅಪೇಕ್ಷೆಯಂತೆ ಆ ಕಾರ್ಯವು ನೆರವೇರಿತು. ಬಸವಣ್ಣನಿಗೆ ಅಭಿಮುಖವಾಗಿ ಶಿವಲಿಂಗವಿಲ್ಲದ ಹಾಗೂ ಪೂರ್ವಾಭಿಮುಖವಾಗಿ ನಂದಿ ವಿಗ್ರಹವಿರುವ ಅಪರೂಪದ ದೇವಸ್ಥಾನ ಇದಾಗಿದೆ. ಅಂತೆಯೇ ಅದೊಂದು ಜಾಗೃತ ಸ್ಥಾನವಾಗಿದ್ದು ಭಾವುಕ ಭಕ್ತರ ಬಯಕೆಗಳನ್ನು ಈಡೇರಿಸುವ ' ದೇವರು ' ಅನಿಸಿಕೊಂಡಿದೆ.

ಶ್ರೀ ಬಸವೇಶ್ವರ ಸೇವಾಸಕ್ತ ಮಂಡಳಿಯವರು ಅಕ್ಷಯ ತದಿಗಿ (ಬಸವ ಜಯಂತಿ)ಯಂದು ಶ್ರೀ ಬಸವೇಶ್ವರರ ಹಾಗೂ ಶ್ರೀ ಜಗದ್ಗುರು ಏಕೋರಾಮಾರಾಧ್ಯರ ಭಾವಚಿತ್ರಗಳ ಉತ್ಸವವನ್ನು ಬಹು ವಿಜೃಂಭಣೆಯಿಂದ ನೆರವೇರಿಸುತ್ತಾರೆ. ಮೂರನೆಯ ದಿನ ಶ್ರೀ ಬಸವಣ್ಣನ ದೊಡ್ಡ ರಥೋತ್ಸವವು ನೆರವೇರುತ್ತದೆ. ಇದೇ ಕಾಲಕ್ಕೆ ವೀರಶೈವ ವಟುಗಳಿಗೆ ಉಚಿತ ಶಿವದೀಕ್ಷೆ ಹಾಗೂ ಸಕಲ ಮತೀಯರ ಧರ್ಮಾರ್ಥ ಸಾಮೂಹಿಕ ವಿವಾಹಗಳನ್ನು ಪ್ರತಿವರ್ಷ ನೆರವೇರಿಸುತ್ತಲಿದ್ದಾರೆ. ಭಾದ್ರಪದ ಶುದ್ಧ ಚವತಿಯಿಂದ ಚತುರ್ದಸಿಯ ವರೆಗೆ ಸಾರ್ವಜನಿಕ ಗಣೇಶೋತ್ಸವ ಸಮಾರಂಭವು ಬಹು ವಿಜೃಂಭಣೆಯಿಂದ ನೆರವೇರುತ್ತದೆ. ಈ ಸಮಯದಲ್ಲಿ ಅನೇಕ ಸಾಮಾಜಿಕ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ. ಚತುರ್ದಸಿಯಂದು ಏರ್ಪಡಿಸುವ ಸಾರ್ವಜನಿಕ ಅನ್ನಸಂತರ್ಪಣೆ ಅನುಪಮವಾಗಿದ್ದು ಸುವಿಖ್ಯಾತವಾಗಿದೆ.

ಮಂದಿರವು ವಿಶೇಷ ಆಸ್ತಿ-ಪಾಸ್ತಿಯನ್ನೇನೂ ಹೊಂದಿಲ್ಲ. ಭಕ್ತರೇ ಇದರ ಬಂಡವಾಳವು. ಭಕ್ತರ ಸಹಾಯ-ಸಹಕಾರಗಳಿಂದ ಕಾಣಿಕೆಗಳ ಸಂಗ್ರಹದಿಂದ ವಿವಾಹ ಮುಂತಾದ ದೊಡ್ಡ ಸಮಾರಂಭಗಳಿಗೆ ಬೇಕಾಗುವ ಪಾತ್ರೆ-ಪಡಗಗಳನ್ನು ಮಂಡಳಿಯವರೇ ಸಂಗ್ರಹಿಸಿದ್ದಾರೆ. ನಗರದ ಹಾಗೂ ತಾಲೂಕಿನ ಮಹಾಜನತೆ ಅವುಗಳ ಉಪಯೋಗವನ್ನು ಪಡೆಯುತ್ತಲಿದ್ದಾರೆ. ಮಂಡಳಿಯವರು ಸಕಲ ಮತೀಯರ ವಿವಾಹಾದಿ ಸಮಾರಂಭಗಳ ಉಪಯೋಗಕ್ಕಾಗಿ ಕಲ್ಯಾಣ ಮಂಟಪವನ್ನು ಕಟ್ಟಿಸಲು ನಿರ್ಧರಿಸಿದ್ದಾರೆ. ದಿ॥ ೫-೪-೧೯೮೮ ರಂದು ಶ್ರೀಜಗದ್ಗುರು ಪಂಚಾಚಾರ್ಯರುಗಳ ಪ್ರಸಾದ

ಹಸ್ತದಿಂದ "ಶ್ರೀ ಜಗದ್ಗುರು ಪಂಚಾಚಾರ್ಯ ಮಂಗಲ ಮಂದಿರ" ಶಂಕುಸ್ಥಾಪನೆ ಸಮಾರಂಭ ನೆರವೇರಲಿದೆ.

ಮಂಡಳಿಯ ಸಕಲ ಸದಸ್ಯರು ಹೊನ್ನಾಳಿ ಹಿರಿಯ ಕಲ್ಲ ಮಠದ ಸ್ಥಿರ ಪಟ್ಟಾಧ್ಯಕ್ಷರಾದ ಒಡೆಯರ ಶ್ರೀ ಷ॥ ಬ್ರ॥ ಚಂದ್ರಶೇಖರಶಿವಾಚಾರ್ಯ ಸ್ವಾಮಿಗಳವರಲ್ಲಿ ವಿಶೇಷ ಶ್ರದ್ಧಾಭಕ್ತಿಯುಳ್ಳವರಾಗಿದ್ದಾರೆ ಮಂಡಳಿಯವರು ಯಾವುದೇ ಕಾರ್ಯಕ್ರಮವನ್ನು ಹಮ್ಮಿಕೊಂಡರೂ ಅವರ ನೇತೃತ್ವ ಹಾಗೂ ಮಾರ್ಗದರ್ಶನವನ್ನು ಅಪೇಕ್ಷಿಸುತ್ತಾರೆ. ಅಂತೆಯೇ ಅವರು ಹೊನ್ನಾಳಿಯ ಹಿರೇಕಲ್ಲಮಠದ "ಚೆನ್ನ ಚೇತನ ಪ್ರಕಾಶನ"ದ ಚೊಚ್ಚಿಲು ಕೃತಿಯಾದ "ವೀರಶೈವ ಪಂಚಪೀಠ ಪರಂಪರೆ" ಗ್ರಂಥವನ್ನು ತಮ್ಮ ಮಂಡಳಿಯಿಂದಲೇ ಪ್ರಕಟಿಸಲು ನಿರ್ಧರಿಸಿ ತಮ್ಮ ಔದಾರ್ಯವನ್ನು ವ್ಯಕ್ತಪಡಿಸಿದ್ದಾರೆ. ಅವರಿಗೆ ಹಾಗೂ ಶ್ರೀ ಬಸವಣ್ಣನ ಸಕಲ ಭಕ್ತಮಂಡಳಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಶ್ರೀ ಚೆನ್ನಮಲ್ಲಿಕಾರ್ಜುನ ಸ್ವಾಮಿಯು ಆಯುರಾರೋಗ್ಯ ಸಕಲ ಸಂಪದಭಿವೃದ್ಧಿಯನ್ನು ಅನುಗ್ರಹಿಸಲಿ ಎಂದು ಆಶಿಸಲಾಗಿದೆ.

ಪರಿಚಯಿಸಿದವರು,<br>
ಪ್ರಾ, ಅ. ಸಿ. ಹಿರೇಮಠ,<br>
ರಾಣೇಬೆನ್ನೂರು.

# ಪ್ರಕಾಶನ ಚಿಂತನ

ವಿಶ್ವವು ವಿಚಿತ್ರವಾದ ಸನ್ನಿವೇಶವನ್ನು ಇಂದು ಎದುರಿಸುತ್ತಲಿದ್ದೆ. ಮಾನವರ ಬಯಕೆಗಳನ್ನು ಈಡೇರಿಸುವಲ್ಲಿ ವಿಜ್ಞಾನವು ಹಗಲಿರುಳೂ ಶ್ರಮಿಸಿ. ವಿಪುಲ ಸೌಕರ್ಯಗಳನ್ನು, ವಸ್ತುಗಳನ್ನೂ ಒದಗಿಸುತ್ತಲಿದೆ. ಆದರೆ ವಿಜ್ಞಾನವು ಮಾನವನಿಗೆ ಬೇಕಾದ ಚಿರಶಾಂತಿಯನ್ನು ನೀಡುವಲ್ಲಿ ವಿಫಲವಾಗಿದೆಯಷ್ಟೇ ಅಲ್ಲ. ವಿಪರೀತ ಮಾನಸಿಕ ತುಮುಲವನ್ನುಂಟುಮಾಡಿದೆಯೆಂದರೆ ಅತಿಶಯೋಕ್ತಿಯಲ್ಲ ಹಳ್ಳಿಯಿಂದದಿಳ್ಳಿಯವರೆಗೂ, ರಾಜ್ಯಗಳಿಂದ ರಾಷ್ಟ್ರಗಳವರೆಗೂ ಹಬ್ಬಿರುವ ಅಶಾಂತ ಮನುಕುಲವನ್ನು ತಬ್ಬಿಬ್ಬಾಗಿಸಿದೆ. ಧನ-ದೌಲತ್ತು, ವಸ್ತು-ವಾಹನಗಳು, ಆಸ್ತಿ-ಪಾಸ್ತಿಗಳು ಚಿತ್ತಕ್ಷೋಭೆಗೆ ಕಾರಣವಾಗಿವೆಯಲ್ಲದೇ ನಿತ್ಯ ಸುಖ-ಶಾಂತಿಗೆ ಸಾಧನಗಳಾಗಿಲ್ಲ. ಆಶೆ-ಆಮಿಷ-ರೋಷಗಳು ಉಲ್ಬಣಗೊಂಡಿವೆಯಲ್ಲದೇ ಸಮಾಧಾನ- ಸಂತೃಪ್ತಿಗಳಿಗೆ ಎಡೆಯಿಲ್ಲದಾಗಿದೆ. ಹಾಗಾದರೆ ಮಾನವನ ಹಲವು ಹತ್ತು ಸಮಸ್ಯೆಗಳನ್ನು ಪರಿಹಸಿ ಅವನಿಗೆ ಶಾಂತಿ ಸಮೃದ್ಧಿ ಸಮಾಧಾನ ತರಬಲ್ಲ, ನೀಡಬಲ್ಲ ಸಾಧನವಾವುದೂ ಇಲ್ಲವೇ? ಇದೆ, ಅದೇ ಧರ್ಮದ ಹಾದಿ॥ ಧರ್ಮದ ತಿಳುವಳಿಕೆ, ಧಾರ್ಮಿಕ ಆಚಾರ-ವಿಚಾರಗಳ ಅನುಷ್ಠಾನ, ಗುರುದೇವತಾ ಭಕ್ತಿ, ಪ್ರೀತಿ-ವಿಶ್ವಾಸ ಮಾನವನ ಮನ- ಮನೆಗಳನ್ನು ತುಂಬಬೇಕು ಅವನ ಹೃದಯ ಅವುಗಳಿಗೆ ಇಂಬುಗೊಡಬೇಕು ಇದನ್ನು ಸಾಧಿಸಲು ದೇಶದ ಪ್ರತಿಯೊಬ್ಬ ಪ್ರಜೆಗೂ ಶಿಕ್ಷಣ ನೀಡಬೇಕು ಶಿಕ್ಷಣ ಪ್ರಸಾರದ ಕಾರ್ಯವನ್ನು ಶ್ರದ್ಧೆಯಿಂದ ನಿರ್ವಹಿಸುವಲ್ಲಿ ದೇಶದಲ್ಲಿಯ ವೀರಶೈವಮಠ ಮಂದಿರಗಳು, ಸಂಘ-ಸಂಸ್ಥೆಗಳು- ಅದ್ಭುತ ಅವಿಸ್ಮರಣೀಯ ಪಾತ್ರ ವಹಿಸಿವೆ ಎಂಬುದರಲ್ಲಿ ಎರಡು ಮಾತಿಲ್ಲ ಅದೇ ಹಾದಿಯಲ್ಲಿ ಹೊನ್ನಾಳಿಯ ಹಿರೇಕಲ್ಮಠವೂ ಸಾಗಿದೆ. ಪುರೋಗಾಮಿ ಹಾದಿಯಲ್ಲಿ ಮುನ್ನಡೆಯುತ್ತಲಿದೆ. ಶಾಲೆ-ಕಾಲೇಜುಗಳು ನಿಗದಿತ ಪಠ್ಯಕ್ರಮಗಳೊಂದಿಗೆ ಸೀಮಿತ ಶಿಕ್ಷಣ ನೀಡುವ ವಿದ್ಯಾಕೇಂದ್ರಗಳಾಗಿವೆ. ಅವುಗಳು ಸಾರ್ವಜನಿಕರಿಗೆ ಸಾರ್ವತ್ರಿಕ ಶಿಕ್ಷಣ ನೀಡಲಾರವು ಎಂಬುದನ್ನರಿತು ಶ್ರೀ ಚನ್ನಮಲ್ಲಿಕಾರ್ಜುನ ಸ್ವಾಮಿ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ ತನ್ಮೂಲಕ ಭಾರತೀಯ ಸಂಸ್ಕೃತಿ ಸಾಹಿತ್ಯಗಳ ಪ್ರಚಾರ ಮಾಡುವ ಉದ್ದೇಶ ಹೊಂದಲಾಗಿದೆ. ಸಾರ್ವತ್ರಿಕ

ಶಿಕ್ಷಣ ಪ್ರಸಾರ ಕಾರ್ಯವನ್ನು ಪುಸ್ತಕಗಳು, ಪತ್ರಿಕೆಗಳು ಯಶಸ್ವಿಯಾಗಿ ನಿರ್ವಹಿಸ ಬಲ್ಲವು ಎಂಬುದರಿಂದ 'ಚೆನ್ನ-ಚೇತನ ಪ್ರಕಾಶನ' ವೆಂಬ ಅಂಗಸಂಸ್ಥೆಯನ್ನು ಇದೀಗ ಪ್ರಾರಂಭಿಸಲಾಗಿದೆ. ತನ್ಮೂಲಕ ನಾಡಿನ, ದೇಶದ ಜನತೆಗೆ ಧರ್ಮ ದರ್ಶನ, ಸಾಹಿತ್ಯ-ಸಂಸ್ಕೃತಿ, ಇತಿಹಾಸ-ಚರಿತ್ರೆಗಳ ಹಾಗೂ ವಿವಿಧ ಭಾಷೆಗಳ ಉತ್ಕೃಷ್ಟ ಕೃತಿಗಳ ಅನುವಾದಿತ ಸಾಹಿತ್ಯದ ಸಮಗ್ರ ಪರಿಚಯ ಮಾಡಿ ಕೊಡಲು ನಿರ್ಧರಿಸಲಾಗಿದೆ. ಖ್ಯಾತ ಸಂಶೋಧಕರು ಲೇಖಕರು, ಸಾಹಿತಿಗಳು, ಕವಿಗಳು, ಚರಿತ್ರೆಕಾರರು, ಅನುವಾದಕರು ಈ ನಿಟ್ಟಿನಲ್ಲಿ ತಂತಮ್ಮ ಕೃತಿರತ್ನ ಗಳನ್ನು ಸಂಸ್ಥೆಗೆ ನೀಡಿ ಪ್ರೋತ್ಸಾಹಿಸಲು ತನ್ಮೂಲಕ ಜನತೆಯ ಮನದ ಕಾಳಿಕೆಯನ್ನು ಕಳೆಯಲು ಸಹಕರಿಸಬೇಕೆಂದು ಕಳಕಳಿಯಿಂದ ಕೇಳಲಾಗು ತ್ತದೆ.

ಶ್ರೀ ಚನ್ನಮಲ್ಲಿಕಾರ್ಜುನಸ್ವಾಮಿ ವಿದ್ಯಾವರ್ಧಕ ಸಂಘದ ಅಂಗ ಸಂಸ್ಥೆ ಯಾಗಿ "ಚೆನ್ನ-ಚೇತನ ಪ್ರಕಾಶನ" ಮೈದಳೆಯುತ್ತಿದ್ದಂತೇ ಅದರ ಪ್ರಪ್ರಥಮ ಕೃತಿಯಾಗಿ "ವೀರಶೈವ ಪಂಚಪೀಠ ಪರಂಪರೆ" ಯಂಥ ಪವಿತ್ರಾತ್ಮರ ಪರಿಚಯಾತ್ಮಕ ಗ್ರಂಥ ಹೊರಬರುತ್ತಿರುವದು ಸುಯೋಗ ಎಂದೇ ಹೇಳ ಬೇಕು. ಗುಳೇದ ಗುಡ್ಡದ ಶ್ರೀ ಷ. ಬ್ರ. ಡಾ|| ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳಂಥ ಸಂಶೋಧಕರು, ವಿದ್ವನ್ಮಣಿಗಳು, ಧರ್ಮ-ದರ್ಶನಗಳಂಥ ಕ್ಲಿಷ್ಟ ವಿಷಯಗಳನ್ನು ಸರಳ ಶೈಲಿಯಲ್ಲಿ ಬರೆಯಬಲ್ಲ ಲೇಖಕರು ನಮ್ಮ ಬಿನ್ನಹಕ್ಕೆ ಮನ್ನಣೆಯಿತ್ತು ಈ ಗ್ರಂಥ ರಚಿಸಿಕೊಟ್ಟುದುದನ್ನು ಎಷ್ಟು ಸ್ಮರಿಸಿ ದರೂ ಕಡಿಮೆಯೇ ಅನಿಸುತ್ತದೆ. ಅವರಿಗೆ ನಮ್ಮ ತುಂಬುಹೃದಯದ ವಂದನೆ ಗಳು. ಅವರಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಶ್ರೀ ಗುರು ಚನ್ನೇಶನು ಆಯುಷ್ಯ-ಆರೋಗ್ಯ ಭಾಗ್ಯಗಳನ್ನು ಅನುಗ್ರಹಿಸುವದರೊಂದಿಗೆ ಅದಮ್ಯ ಉತ್ಸಾಹವನ್ನು ಕರುಣಿಸಿ ಇಂಹತ ನೂರಾರು ಉಪಯುಕ್ತ ಕೃತಿಗಳನ್ನು ರಚಿಸು ವಂತೆ ಆಶೀರ್ವದಿಸಲಿ ಎಂದು ಹಾರೈಸಲಾಗಿದೆ.

ರಾಣೇಬೆನ್ನೂರು ನಗರದ ಭಕ್ತಮಂಡಳಿಗೂ ಹೊನ್ನಾಳಿ ಹಿರೇಕಲ್ಮಠಕ್ಕೂ ಇರುವ ನಂಟು ಸುಮಧುರವಾದುದು. ಶ್ರೀಮಠವು ಹಮ್ಮಿಕೊಂಡ ಶಾಲಾ ಕಟ್ಟಡ ಗಳೇ ಇರಲಿ, ಕಲ್ಯಾಣ ಮಂಟಪವೇ ಆಗಿರಲಿ, ಪ್ರಸಾದ ಮಂದಿರವೇ ಆಗಲಿ, ಎಲ್ಲದಕ್ಕೂ ಅವರವರ ಶಕ್ತ್ಯಾನುಸಾರ ಕಾಣಿಕೆ ನೀಡಿದ್ದಾರೆ. ಅದೇ ರೀತಿ

ಇದೀಗ ಹಮ್ಮಿಕೊಂಡ ಗ್ರಂಥಗಳ ಪ್ರಕಟಣಾ ಕಾರ್ಯದಲ್ಲಿಯೂ ಅವರು ಸೇವೆ ಸಲ್ಲಿಸಿ ಅಗ್ರಗಣ್ಯರೆನಿಸಿಕೊಂಡಿದ್ದಾರೆ ದೊಡ್ಡ ಪೇಟೆಯ ಶ್ರೀ ಬಸವೇಶ್ವರ ದೇವಸ್ಥಾನವು ಸುಪ್ರಸಿದ್ಧ ಮಂದಿರ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯಕ್ರಮಗಳ ಆಗರ! ಶ್ರೀ ಬಸವೇಶ್ವರ ಸೇವಾಸಕ್ತ ಮಂಡಳಿಯವರು ನಮ್ಮ ಸಲಹೆಗೆ ಒಲಿದು ನಮ್ಮ ಚೊಚ್ಚಲು ಪ್ರಕಟಣೆಯಾದ ವೀರಶೈವ ಪಂಚ ಪೀಠ ಪರಂಪರೆ "ಯ ಮುದ್ರಣ ವೆಚ್ಚದ ಹೊಣೆಯನ್ನು ಹೊತ್ತುಕೊಳ್ಳಲು ಮುಂದಾದುದು ಶ್ಲಾಘನೀಯ ಸಂಗತಿಯಾಗಿದೆ. ಅಂಥ ಅನುಪಮ ಸೇವೆಗೈದ ಸಮಿತಿಯ ಸಕಲರಿಗೂ ಸನ್ಮಂಗಲ ಪರಂಪರೆಯನ್ನು ಹಾರೈಸಲಾಗಿದೆ.

ರಾಣೇಬೆನ್ನೂರು ನಗರದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹ ಘಟನೆಯೊಂದು ಜರುಗುತ್ತಲಿದೆ. ವೀರಶೈವ ಧರ್ಮ ಸಾಮ್ರಾಜ್ಯದ ಚಕ್ರವರ್ತಿಗಳಾದ ಪರಮ ಪೂಜ್ಯ ಪಂಚ ಜಗದ್ಗುರುಗಳವರು ಅಡ್ಡಪಲ್ಲಕ್ಕಿ ಮಹೊತ್ಸವದ ಮೂಲಕ ನಗರದಲ್ಲಿ ಪಾದಾರ್ಪಣ ಮಾಡುವದೇ ಆ ಘಟನೆ! ಯೋಗಾಯೋಗವೆಂಬಂತೆ ಶ್ರೀ ಪಂಚಪೀಠಾಧೀಶ್ವರರ ದಿವ್ಯ ಸನ್ನಿಧಾನದಲ್ಲಿ "ವೀರಶೈವ ಪಂಚಪೀಠ ಪರಂಪರೆ" ಗ್ರಂಥದ ಬಿಡುಗಡೆ ರಾಣೇಬೆನ್ನೂರು ನಗರದಲ್ಲಿಯೇ ಜರುಗುತ್ತಿರುವದು ಆನಂದಾಭಿಮಾನದ ಸಂಗತಿಯೆನಿಸಿದೆ. ಅವರುಗಳಲ್ಲಿ ಶುಭಾಶೀರ್ವಾದ ಸಂದೇಶವನ್ನು ನಮ್ಮ ಪ್ರಥಮ ಗ್ರಂಥಕ್ಕೆ ಅನುಗ್ರಹಿಸಿದ್ದಾರೆ- ಚೆನ್ನ ಚೇತನ ಪ್ರಕಾಶನದ ಪರವಾಗಿ ಪರಮ ಪೂಜ್ಯರ ಪಾದಂಗಳಿಗೆ ಭಕ್ತಿಯ ಪ್ರಣಾಮಗಳನ್ನು ಸಲ್ಲಿಸಲಾಗುತ್ತದೆ.

ಶ್ರೀ ಜಗದ್ಗುರು ಪಂಚಾಚಾರ್ಯರ ಸಾಹಿತ್ಯ ಸಂಸ್ಕೃತಿಗಳ ಪ್ರಚಾರಕ್ಕೆ ಸೇವೆಗೆ ಮಿಸಲಾದ ಪಂ. ಲಿಂ. ಶ್ರೀ ಕಾಶಿನಾಥ ಶಾಸ್ತ್ರಿಗಳಿಂದ ಸ್ಥಾಪಿತವಾದ ಮೈಸೂರಿನ ಶ್ರೀ ಪಂಚಾಚಾರ್ಯ ಇಲೆಕ್ಟ್ರಿಕ್ ಪ್ರೆಸ್‌ನ ಮಾಲಿಕರಾದ ವೇ|| ಶ್ರೀ ಬಿ.ಎಂ. ಸಿದ್ಧೇಶ್ವರಯ್ಯನವರು ಹಾಗೂ ಸಿಬ್ಬಂದಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಸುಖ-ಸಮೃದ್ಧಿಗಳನ್ನು ಅನುಗ್ರಹಿಸಲಿ.

ಗ್ರಂಥಕ್ಕೆ ಒಪ್ಪುವಂಥ ಮುನ್ನುಡಿಯನ್ನು ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರೂ, ಸಂಶೋಧಕರೂ ಅನುಭವಿಗಳೂ ಆದ ಡಾ. ಟಿ. ಜಿ. ಸಿದ್ಧಪಾರಾಧ್ಯ ಅವರು ಒದಗಿಸಿದ್ದಾರೆ.ಮುಖಪುಟದ ಸುಂದರ ನಕ್ಷೆಸಿದ್ಧಪಡಿಸಿದ

ಶ್ರೀ ಕೆ. ಬಿ. ಕುಲಕರ್ಣಿ ಹುಬ್ಬಳ್ಳಿ ಹಾಗೂ ಲಾಂಛನದ ನಕ್ಷೆ ತಯಾರಿಸಿದ ಶ್ರೀ ಶಿವಕುಮಾರಸ್ವಾಮಿ ನೆಗಳೂರು ಮಠ, ಹುಬ್ಬಳ್ಳಿ ಅವರಿಗೂ ಸಹ ಶುಭವನ್ನು ಹರಸಲಾಗಿದೆ.

ಪ್ರಥಮ ಕೃತಿಯನ್ನು ಆದರಿಂದ ಓದಿ ಪ್ರೋತ್ಸಾಹಿಸುವ ಓದುಗರು ಚೆನ್ನ-ಚೇತನ ಪ್ರಕಾಶನದ ಹಿತೈಷಿಗಳು ಎಂದು ಭಾವಿಸುತ್ತ ಎಲ್ಲರ ಸಹಾಯ ಸಹಕಾರವನ್ನು ಅಪೇಕ್ಷಿಸಲಾಗಿದೆ.

ಹಿರೇಕಲ್ಮಠ, ಹೊನ್ನಾಳಿ. ಪ್ರಕಾಶಕರು

೪-೪-೧೯೭೮ ಚೆನ್ನಚೇತನ ಪ್ರಕಾಶನ.

# ವಿಷಯ ಸೂಚಿ

ಶ್ರೀ ಜಗದ್ಗುರು ದಾರುಕಾಚಾರ್ಯರು, ಶ್ರೀ ಜ. ಮರುಳಾರಾಧ್ಯರು, ಮಧ್ಯಪ್ರದೇಶದ ಮಹಾಕಾಲ ಉಜ್ಜಯಿನಿಯಲ್ಲಿ ಮೂಲ ಪೀಠ, ಶ್ರೀ ಸದ್ಧರ್ಮಪೀಠದ ಸ್ಥಳಾಂತರಣೆ, ಶ್ರೀ ಮರುಳಸಿದ್ಧಾಂಕದ ವಿಷಯವಸ್ತು, ಈ ಪೀಠ ಪರಂಪರೆಯ ಅನೇಕ ಆಚಾರ್ಯರ ಉಲ್ಲೇಖ, ಶ್ರೀ ಜ. ಸಿದ್ಧಲಿಂಗಶಿವಾಚಾರ್ಯರು, ಅವರು ಮಾಡಿದ ಮಹತ್ವಪೂರ್ಣ ಕಾರ್ಯಗಳು. ಸಧ್ಯದ ಶ್ರೀ ಜಗದ್ಗುರು ಸಿದ್ಧೇಶ್ವರಶಿವಾಚಾರ್ಯರು ಮತ್ತು ಶ್ರೀಜಗದ್ಗುರು ಚರಪಟ್ಟಾಧ್ಯಕ್ಷ ಮರುಳಾರಾಧ್ಯಶಿವಾಚಾರ್ಯರು. ಉಜ್ಜಯಿನೀ ಪೀಠದ ಪರಂಪರೆಯ ಜಗದ್ಗುರುಗಳ ೧೧೦ ಹೆಸರುಗಳು.



ಶ್ರೀಜಗದ್ಗುರು ತ್ರ್ಯಕ್ಷರಶಿವಾಚಾರ್ಯರು ಶ್ರೀ ಜ. ಘಂಟಾಕರ್ಣಶಿವಾಚಾರ್ಯರು, ಶ್ರೀ ಜ. ಏಕೋರಾಮಾರಾಧ್ಯಶಿವಾಚಾರ್ಯರು ಶ್ರೀ ಜ. ಆನಂದಲಿಂಗಶಿವಾಚಾರ್ಯರು, ಶ್ರೀ ಜನಮೇಜಯ ಮಹಾರಾಜನ ದಾನಶಾಸನ, ಶ್ರೀ ಜ. ಭೃಕಂಡಲಿಂಗಶಿವಾಚಾರ್ಯರು, ಶ್ರೀ ಜ. ಗಣೇಶಲಿಂಗಶಿವಾಚಾರ್ಯರು, ಶ್ರೀ ಜ. ನೀಲಕಂಠಲಿಂಗಶಿವಾಚಾರ್ಯರು, ಶ್ರೀ ಜ. ನೀಲಕಂಠಲಿಂಗಶಿವಾಚಾರ್ಯರಿಂದ ಉತ್ತರಾಖಂಡದಲ್ಲಿ ವಿದ್ಯಾಪೀಠ ಸ್ಥಾಪನೆ, ಶ್ರೀ ಜ. ನೀಲಕಂಠಲಿಂಗಶಿವಾಚಾರ್ಯರ ವಿದ್ವಾಂಸ ಶಿಷ್ಯರು, ಶ್ರೀ ವಿಶ್ವನಾಥಲಿಂಗರು, ಶ್ರೀ ಜ. ಶಾಂತಲಿಂಗಶಿವಾಚಾರ್ಯರು, ಶ್ರೀ ಜ. ಸಿದ್ಧೇಶ್ವರಲಿಂಗಶಿವಾಚಾರ್ಯರು ಶ್ರೀ ಜ. ಸಿದ್ಧೇಶ್ವರಲಿಂಗರ ಶಿಷ್ಯರು ಹಾಗೂ ಪೂಜಾರಿಗಳು, ಶ್ರೀ ಕೇದಾರಪೀಠದ ಪರಂಪರೆಯ ೩೨೩ ಹೆಸರುಗಳು.



ಶ್ರೀಶೈಲ ಮತ್ತು ಮಲ್ಲಿಕಾರ್ಜುನ ಲಿಂಗ, ಶ್ರೀಶೈಲದ ದರ್ಶನೀಯ ಸ್ಥಳಗಳು, ಶ್ರೀ ಜಗದ್ಗುರು ಪಂಡಿತಾರಾಧ್ಯಪೀಠ, ಶ್ರೀ ಜ. ಧೇನುಕರ್ಣ

ಶಿವಾಚಾರ್ಯರು ಮತ್ತು ಸಾನಂದಮಹರ್ಷಿಗಳು, ಸ್ಕಂದಪುರಾಣ ಪ್ರತಿಪಾದಿತ ಶ್ರೀ ಜ ಸದಾನಂದಶಿವಾಚಾರ್ಯರು. ಶ್ರೀಶೈಲದ ಪಂಚ ಮಠಗಳು, ಶ್ರೀಜಗದ್ಗುರು ಜಂಗಮಮಲ್ಲಿಕಾರ್ಜುನದೇವಾಚಾರ್ಯರು, ಶ್ರೀ ಶ್ರೀಪತಿಪಂಡಿತಾರಾಧ್ಯರು, ಶ್ರೀ ಮಲ್ಲಿಕಾರ್ಜುನಪಂಡಿತಾರಾಧ್ಯರು, ಶ್ರೀ ಜ. ಸಿದ್ಧಭಿಕ್ಷಾವೃತ್ತಿ ಶಿವಾಚಾರ್ಯರು, ಶ್ರೀ ಜ. ನಾಗಲೂಟಿ ಭಿಕ್ಷಾವೃತ್ತಿಶಿವಾಚಾರ್ಯರು ಶ್ರೀ ಜ. ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರು ಇವರು ಸಾಧಿಸಿದ ಮಹತ್ಕಾರ್ಯಗಳು, ಶ್ರೀ ಜ. ಉಮಾಪತಿಪಂಡಿತಾರಾಧ್ಯಶಿವಾಚಾರ್ಯರು, ಶ್ರೀಶೈಲ ಪೀಠ ಪರಂಪರೆಯ ಜಗದ್ಗುರುಗಳ ಹೆಸರುಗಳು ಹಾಗೂ ಅವರ ಕಾಲಮಾನ.

**ಶ್ರೀ ಕಾಶೀ ಪೀಠದ ಪರಂಪರೆ .... .... ೧೧೫–೧೯೬**

ಶ್ರೀ ಕಾಶೀ ಕ್ಷೇತ್ರದ ಮಹಿಮೆ, ಕಾಶಿಯಲ್ಲಿಯ ವಿಭಿನ್ನ ಸಂಪ್ರದಾಯದ ಮಠಗಳು, ಅತ್ಯಂತ ಪ್ರಾಚೀನವಾದ ಜಂಗಮವಾಡಿಮಠ ಶ್ರೀ ಜಗದ್ಗುರು ವಿಶ್ವಕರ್ಣಶಿವಾಚಾರ್ಯರಿಂದ ದೂರ್ವಾಸಮಹರ್ಷಿ ಗಳಿಗೆ ವೀರಶೈವ ತತ್ತ್ವೋಪದೇಶ, ಶ್ರೀಜಗದ್ಗುರು ವಿಶ್ವಾರಾಧ್ಯರು, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಶ್ರೀ ಜಗದ್ಗುರು ಮಲ್ಲಿಕಾರ್ಜುನಮಹಾಸ್ವಾಮಿಗಳಿಗೆ ಕಾಶೀ ಜಯನಂದದೇವನ ದಾನಶಾಸನ, ದಾನಶಾಸನದ ಸ್ವರೂಪ, ಜಂಗಮವಾಡಿಮಠದ ದಾನ ಭೂಮಿಯಲ್ಲಿ ಕಾಶೀ ಹಿಂದೂ ವಿಶ್ವವಿದ್ಯಾಲಯದ ಸ್ಥಾಪನೆ. ವಿಶ್ವ ವಿದ್ಯಾಲಯದ ಪರಿಸರದಲ್ಲಿ ಕಾಶೀ ಪೀಠದ ಜಗದ್ಗುರುಗಳ ಸಮಾಧಿಗಳು ೮೦ ನೇ ಜಗದ್ಗುರುಗಳಾದ ಶ್ರೀ ವೀರಭದ್ರ ಶಿವಾಚಾರ್ಯರಿಂದ ವಿಶ್ವಾ ರಾಧ್ಯ ಬ್ಯಾಂಕಿನ ಸ್ಥಾಪನೆ, ಶ್ರೀ ಜ. ರಾಜೇಶ್ವರಶಿವಾಚಾರ್ಯರು, ಇವರು ಮಾಡಿದ ಮಹೋನ್ನತ ಕಾರ್ಯಗಳು, ಶ್ರೀ ಜ. ಶಿವಲಿಂಗ ಶಿವಾಚಾರ್ಯರು, ಶ್ರೀ ಜ. ಪಂಚಾಕ್ಷರಶಿವಾಚಾರ್ಯರು, ಶ್ರೀ ವಿಶ್ವಾ ರಾಧ್ಯ ಬ್ಯಾಂಕಿನ ದಿವಾಳಿ, ಕೋರ್ಟಿನ ಕೇಸು, ದಾನಶಾಸನಗಳ ದಾಖಲೆ ಶಾಸನಗಳಿಗೆಲ್ಲ ಕೋರ್ಟಿನ ಮಾನ್ಯತೆ, ನೇಪಾಲದೇಶದ ಭಾತಗಾಂವದಲ್ಲಿ ಜಂಗಮವಾಡಿ ಮಠ, ನೇಪಾಳದ ಶ್ರೀ ವಿಶ್ವಮಲ್ಲನ

॥ ಶ್ರೀಜಗದ್ಗುರು ವೀರಗಂಗಾಧರಾಯ ನಮಃ ॥

ಸನಾತನ ಧರ್ಮಕ್ಕೆ ಜಯವಾಗಲಿ !    ಧರ್ಮದಿಂದಲೇ ವಿಶ್ವಕ್ಕೆ ಶಾಂತಿ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

## ಶ್ರೀ ಸನ್ನಿಧಿಗೆ ಸಮರ್ಪಣೆ!

ಪಂಚ ಪೀಠಗಳೇ ಪಂಚ ಪ್ರಾಣಗಳೆಂದು
ಸಂಚರಿಸಿ ಆಸೇತು ಹಿಮಾಚಲದಿ
ಮಿಂಚಿಸಿದೆ ಪಂಚಪೀಠಗಳ ಪ್ರಕಾಶವ
ಕೊಂಚವೂ ವಿಶ್ರಮಿಸಲಿಲ್ಲ ಜೀವನದಿ !

ಧರ್ಮಸಿಂಹವೇ ಗರ್ಜಿಸಿದೆ ಧರ್ಮದೇಳ್ಗೆಗೆ
“ ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ” ಯೆಂದು
ಧರ್ಮಪತಾಕೆಯನೇರಿಸಿ ಆಗಸದೆತ್ತರಕೆ
ಧರ್ಮಕಾಗಿ ಆಳಿ ಬಾಳಿದೈ ಜಗದ್ಗುರುವೆ.

ಇದೋ ನಿನಗರ್ಪಿತವೀ ‘ ಹೊನ್ನರಳಿಯ ಮೊದಲ್ಗಳ ’
ಅದುವೇ ‘ ವೀರಶೈವ ಪಂಚಪೀಠ ಪರಂಪರೆ ’
ಸದುವಿನಯದಿ ಸಮರ್ಪಿಸಿ ಕೃತಾರ್ಥರಾದೆವೈ
ಮದ್ವೀರಶೈವ ಪಂಚಪೀಠ ಪರಿಚಯ ಗ್ರಂಥವ.

ಹೊನ್ನಾಳಿ, ಹಿರೇಕಲ್ಮಠ    ಚೆನ್ನ ಚೇತನ ಪ್ರಕಾಶನ.

ಯುಗಾದಿ ಪಾಡ್ಯ, ವಿಭವನಾಮಸಂವತ್ಸರ, ೧೯೧೦
ಶುಕ್ರವಾರ ೧೮-೩-೧೯೮೮

ಮುಕ್ತಿಮಂದಿರ ಮಹರ್ಷಿ, ತಪೋನಿಧಿ !
ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ
ಶ್ರೀ ೧೦೦೮ ಜಗದ್ಗುರು
ಪ್ರಸನ್ನ ರೇಣುಕ ಲಿಂ. ವೀರಗಂಗಾಧರ ಶಿವಯೋಗಿ ರಾಜೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು

॥ ಶ್ರೀಜಗದ್ಗುರು ವೀರಗಂಗಾಧರಾಯ ನಮಃ ॥

**ಸನಾತನ ಧರ್ಮಕ್ಕೆ ಜಯವಾಗಲಿ !** **ಧರ್ಮದಿಂದಲೇ ವಿಶ್ವಕ್ಕೆ ಶಾಂತಿ**



**ಮುಕ್ತಿಮಂದಿರ ಮಹರ್ಷಿ, ತಪೋನಿಧಿ !**
**ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ**
**ಶ್ರೀ ೧೦೦೮ ಜಗದ್ಗುರು**
**ಪ್ರಸನ್ನ ರೇಣುಕ ಲಿಂ. ವೀರಗಂಗಾಧರ ಶಿವಯೋಗಿ ರಾಜೇಂದ್ರ**
**ಶಿವಾಚಾರ್ಯ ಮಹಾಸ್ವಾಮಿಗಳು**

ಹೊನ್ನರಳಿಯ ಮೊದಲ ದಳ "ವೀರಶೈವ ಪಂಚಪೀಠ ಪರಂಪರೆ" ಗ್ರಂಥವನ್ನು ರಾಣಿಬೆನ್ನೂರು ನಗರದಲ್ಲಿ ಬಿಡುಗಡೆಮಾಡಿದ ಪಂಚಪೀಠಾಧೀಶ್ವರರು. ಸೋಮವಾರ, 4-4-1988



ಶ್ರೀ ಜಗದ್ಗುರು ಪಂಚಾಚಾರ್ಯರು

# ಚೆನ್ನಚೇತನ ಪ್ರಕಾಶನದ ಚೇತನ ಮೂರ್ತಿಗಳು

ಪ್ರೇರಕ ಶಕ್ತಿ



ಲಿಂ. ಶ್ರೀ ಮೃತ್ಯುಂಜಯಶಿವಾಚಾರ್ಯ
ಸ್ವಾಮಿಗಳು

ಸಂಸ್ಥಾಪಕರು



ಶ್ರೀ ಒಡೆಯರ ಚಂದ್ರಶೇಖರಶಿವಾಚಾರ್ಯ
ಸ್ವಾಮಿಗಳು,

ಶ್ರೀ ಬಸವಣ್ಣನ ವಿಗ್ರಹ



ಗ್ರಂಥ ಪ್ರಕಟಣೆ ದಾನಿಗಳು

ಕರಮುಗಿದು, ಶಿರಬಾಗಿ ಬರುವ ಭಕ್ತರಿಗೆ ವರ ನೀಡುವ ತಾಣ



ಸುಕ್ಷೇತ್ರ ಶ್ರೀ ಬೃಹಚ್ಛಿಲಾ ಮಠ (ಹಿರೇಕಲ್ಮಠ) ಹೊನ್ನಾಳಿ.

# ಪೀಠಿಕೆ

ದರ್ಶನಶಾಸ್ತ್ರಗಳ ತವರುಮನೆಯಾದ ನಮ್ಮ ಭಾರತ ದೇಶದಲ್ಲಿ "ನಿಗಮ" ಮತ್ತು "ಆಗಮ" ಭೇದದಿಂದ ಎರಡು ಶಾಸ್ತ್ರಗಳು ಅತ್ಯಂತ ಪ್ರಸಿದ್ಧಗಳಾಗಿವೆ. ಇವುಗಳಲ್ಲಿ ಶಿವನ ನಿಃಶ್ವಾಸದಿಂದ ನಿಃಶ್ರೃತಗಳಾದ ಶಾಸ್ತ್ರಗಳನ್ನು ನಿಗಮುಗಳೆಂತಲೂ ಮತ್ತು ಅವನ ವಾಗ್ವ್ಯವಹಾರರೂಪಗಳಾದ ಶಾಸ್ತ್ರಗಳನ್ನು ಆಗಮುಗಳೆಂತಲೂ ಕರೆಯುತ್ತಾರೆ.ಅಂತೆಯೇ "ನಿಶ್ಚಯೇನ ತತ್ತ್ವಂ ಗಮಯತೀತಿ ನಿಗಮಃ" ಮತ್ತು "ಆಪ್ತವಚನಾದಾವಿರ್ಭೂತವಾರ್ಥ ವಿಶೇಷ ಸಂವೇದನಮಾಗಮಃ" ಎಂಬುದಾಗಿ ನಿಗಮಾಗಮುಗಳ ವ್ಯುತ್ಪತ್ತಿಗಳು ಪ್ರಸಿದ್ಧವಾಗಿವೆ. ನಿಗಮ (ವೇದ)ಗಳಲ್ಲಿ ಪರಸ್ಪರ ವಿರುದ್ಧಾರ್ಥ ಪ್ರತಿಪಾದಕಗಳಾದ ಮಂತ್ರಗಳಿರುವುದರಿಂದ—ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಮತ್ತು ಉಪಪತ್ತಿಗಳೆಂಬ ಶ್ರುತಿ ಷಡ್ಲಿಂಗಗಳ (ಆರು ಪ್ರಮಾಣಗಳ) ಸಹಾಯವಿಲ್ಲದೇ ಅವುಗಳ ಅರ್ಥವನ್ನು ನಿರ್ಣಯಿಸುವುದು ಸಾಮಾನ್ಯ ಜನರಿಗೆ ಸಾಧ್ಯವಾಗುವದಿಲ್ಲವೆಂಬ ಬಾವನೆಯಿಂದ, ಭಗವಂತನು ಸರ್ವ ಜನರ ಉಪಯೋಗಕ್ಕಾಗಿ ಶ್ರೀಪಾರ್ವತಿಯನ್ನು ಉದ್ದೇಶಿಸಿ ಉಪದೇಶಿಸಿದ ಶಾಸ್ತ್ರಗಳೇ ಆಗಮಶಾಸ್ತ್ರಗಳು—ಎಂದು ಪ್ರತೀತಿ ಇದೆ.

ಆಗತಂ ಶಿವವಕ್ತ್ರಾತ್ತು ಗತಂ ಚ ಗಿರಿಜಾಮುಖೇ ।
ಮತಂ ಶ್ರೀವಾಸುದೇವೇನ ಆಗಮಸ್ತೇನ ಕೀರ್ತಿತಃ ॥

(ಭಾಸ್ಕರೀ ದ್ವಿ. ಭಾಗ. ಪು. ೮೫)

ಎನ್ನುವ ವಚನಪ್ರಮಾಣದಂತೆ-ಪರಶಿವನ ವದನಾರವಿಂದದಿಂದ ಹೊರಹೊಮ್ಮಿ ಶ್ರೀ ಪಾರ್ವತಿಯ ಬುದ್ಧಿಯನ್ನು ಪ್ರವೇಶಿಸುವಾಗ ಅಲ್ಲಿಯೇ ಸಾಕ್ಷಿಯಾಗಿರುವ ಶ್ರೀ ವಾಸುದೇವನಿಂದ ಯಾವ ಶಾಸ್ತ್ರವು ಸಮ್ಮತಿಯನ್ನು ಪಡೆಯಿತೋ ಅದುವೇ ಆಗಮಶಾಸ್ತ್ರವೆಂದು ತಾತ್ಪರ್ಯವು. ಇದು ಆಗಮ

ಶಬ್ದದ ರೂಢಾರ್ಥವು. ಇನ್ನು ಯೌಗಿಕಾರ್ಥವನ್ನು ವಿಚಾರಿಸುವುದಾದರೆ– "ಆ ಸಮಂತಾರ್ಥಂ ಗಮಯತೀತಿ ಆಗಮಃ" ಎನ್ನುವವ್ಯುತ್ಪತ್ತಿಯ ಪ್ರಕಾರ– ಸಂಪೂರ್ಣ ತತ್ತ್ವವನ್ನು ಬೋಧಿಸುವ ಶಾಸ್ತ್ರವೇ ಆಗಮ ಶಾಸ್ತ್ರವು.

"ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾದ್ ಅಭ್ಯುದಯ– ನಿಃಶ್ರೇಯಸೋಪಾಯಾಃ ಸ ಆಗಮಃ" (ಯೋ ಸೂ. ೧-೩ ತತ್ತ್ವ ವೈಶಾರದಿ) ಅಂದರೆ ಇಹಲೋಕದ ಏಳ್ಗೆ ಮತ್ತು ಪಾರಲೌಕಿಕ ಮುಕ್ತಿ ಇವೆರಡನ್ನು ಪಡೆಯುವ ಉಪಾಯಗಳು ಯಾವ ಶಾಸ್ತ್ರದಿಂದ ಜನಸಾಮಾನ್ಯರಿಗೆ ಸರಳವಾಗಿ ತಿಳಿಯುವವೋ ಅವೇ ಆಗಮಶಾಸ್ತ್ರಗಳೆಂಬುದಾಗಿ ಶ್ರೀ ವಾಚಸ್ಪತಿ ಮಿಶ್ರರು ಆಗಮಗಳ ಮಹತಿಯನ್ನು ಕೊಂಡಾಡಿದ್ದಾರೆ.

ಆಗಮಗಳಿಗೆ 'ತಂತ್ರ'ವೆಂಬ ಪರ್ಯಾಯ ನಾಮವೂ ಇದೆ. "ತನ್ಯತೇ ವಿಸ್ತಾರ್ಯತೇ ಜ್ಞಾನಮನೇನ" ಅಂದರೆ ಯಾವುದರ ಅಧ್ಯಯನದಿಂದ ಎಲ್ಲ ವಿಧದ ಜ್ಞಾನ ಪ್ರಾಪ್ತವಾಗುವುದೋ ಅದೇ ತಂತ್ರವು. ಇದೇ ಅರ್ಥವನ್ನೇ ಗಾಮಿಕಾಗಮದ–

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಈ ಶ್ಲೋಕವು ಸ್ಪಷ್ಟವಾಗಿ ಪ್ರತಿಪಾದಿಸುತ್ತಿದೆ.

ಆಗಮ (ತಂತ್ರ) ಗಳ ಭೇದ:

ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥

(ಸಿ. ಶಿ. ೫-೯)

ಎನ್ನುವ ಶ್ರೀಜಗದ್ಗುರು ರೇಣುಕಭಗವತ್ಪಾದರ ಉಪದೇಶದಂತೆ, ಆಗಮಗಳು ಶೈವ–ಪಾಶುಪತ–ಸೋಮ ಮತ್ತು ಲಾಕುಲಾದಿ ಭೇದದಿಂದ ಅನಂತಗಳಾಗಿರುತ್ತವೆ. ಇವುಗಳಲ್ಲಿ ಶೈವಾಗಮಗಳು ವಾಮ–ದಕ್ಷಿಣ–ಮಿಶ್ರ ಮತ್ತು ಸಿದ್ಧಾಂತ ಎಂಬ ಹೆಸರಿನಿಂದ ನಾಲ್ಕು ಪ್ರಕಾರಗಳಾಗಿರುತ್ತವೆ. ಇಲ್ಲಿ ಶಕ್ತಿಯನ್ನೇ ಪ್ರಧಾನ ತತ್ತ್ವವನ್ನಾಗಿ ಬೋಧಿಸುವವುಗಳು ವಾಮಾಗಮ

ಗಳು, ಭೈರವತತ್ತ್ವವನ್ನೇ ಪ್ರಧಾನವನ್ನಾಗಿ ಬೋಧಿಸುವವುಗಳು ದಕ್ಷಿಣಾಗಮಗಳು, ಸಪ್ತ ಮಾತೃಕೆಯರನ್ನು ಪ್ರಧಾನ ತತ್ತ್ವವನ್ನಾಗಿ ಭೋಧಿಸುವವುಗಳೇ ಮಿಶ್ರಾಗಮಗಳು ಮತ್ತು ವೇದಸಮ್ಮತಗಳಾದ ತತ್ತ್ವಗಳನ್ನು ಬೋಧಿಸುವ ಆಗಮಗಳೇ ಸಿದ್ಧಾಂತಾಗಮಗಳು.

ಇವುಗಳಲ್ಲದೇ ಸೌರ, ಗಾಣಪತ್ಯ ಮುಂತಾದ ಆಗಮಗಳೂ ಇವೆ. ಒಟ್ಟಿನಲ್ಲಿ ಪಾಂಚರಾತ್ರಾಗಮಗಳು ೧೦೮, ಶಾಕ್ತಾಗಮಗಳು ೬೪, ಉಪತಂತ್ರಗಳು ೩೨೭, ಶೈವತಂತ್ರಗಳು ೨೮, ಉಪತಂತ್ರಗಳು ೧೨೭, ವೈಷ್ಣವತಂತ್ರಗಳು ೭೫, ಉಪತಂತ್ರಗಳು ೨೦೫—ಹೀಗೆ ವಿಪುಲವಾದ ತಂತ್ರಸಾಹಿತ್ಯವಿದೆ. (ವಿಶೇಷ ಜಿಜ್ಞಾಸೆಯುಳ್ಳವರು ರಾಮದಾಸಗೌಡರಿಂದ ವಿರಚಿತ "ಹಿಂದುತ್ವ" ಎಂಬ ಹಿಂದೀ ಪುಸ್ತಕದ ತಂತ್ರ ಖಂಡವನ್ನವಲೋಕಿಸಬಹುದು.)

ಶೈವಾಗಮಗಳು (ಸಿದ್ಧಾಂತಾಗಮಗಳು) :

ಶ್ರೀಶಿವನಿಂದ ಉಪದೇಶಿಸಲ್ಪಟ್ಟ ಕಾಮಿಕಾದಿ ವಾತುಲಾಂತಗಳಾದ ೨೮ ಆಗಮಗಳಿಗೆ ಶೈವಾಗಮಗಳೆಂದು ಹೆಸರು. ಇವುಗಳನ್ನು "ಸಿದ್ಧಾಂತಾಗಮ" ಗಳೆಂತಲೂ ಕರೆಯುತ್ತಾರೆ. "ಆಪ್ತೋಕ್ತಿರತ್ರ ಸಿದ್ಧಾಂತಃ ಶಿವ ಏವಾಪ್ತಿಮಾನ್ ಯತಃ" ಎನ್ನುವ ಶ್ರೀಕಂಠ ಸೂರಿಯ ಶ್ಲೋಕದ ವ್ಯಾಖ್ಯಾನವನ್ನು ಬರೆಯುವಾಗ ಶ್ರೀ ಅಘೋರಶಿವಾಚಾರ್ಯರು—"ಸಿದ್ಧಾಂತಶಬ್ದಃ ಪಂಕಜಾದಿ ಶಬ್ದವದ್ಯೋಗರೂಢ್ಯಾ ಶಿವಪ್ರಣೀತೇಷು ಕಾಮಿಕಾದಿಷು ದಶಾಷ್ಟಾದಶತಂತ್ರೇಷು ಪ್ರಸಿದ್ಧಃ" (ರತ್ನತ್ರಯ, ಪುಟ, ೫) ಎಂಬುದಾಗಿ ಬರೆದಿದ್ದಾರೆ. ಇದರ ತಾತ್ಪರ್ಯವೇನೆಂದರೆ—ಯಥಾರ್ಥವಕ್ತೃವಾದ ಆಪ್ತಪುರುಷನಿಂದ ಹೇಳಲ್ಪಟ್ಟ ವಚನಗಳನ್ನು ಸಿದ್ಧಾಂತವೆಂದು ಕರೆಯುವರು. ಶ್ರೀಶಿವನು ಸಾಂಸಾರಿಕ ರಾಗ-ದ್ವೇಷಗಳಿಲ್ಲದವನಾಗಿ ಜಗತ್ತಿನ ಸಮಸ್ತ ಮಾನವರ ಕಲ್ಯಾಣಕ್ಕಾಗಿ ಆಗಮಗಳನ್ನು ಉಪದೇಶಿಸಿರುವದರಿಂದ ಅವನನ್ನು ಆಪ್ತಪುರುಷನೆಂತಲೂ, ಅವನಿಂದ ಉಪದೇಶಿಸಲ್ಪಟ್ಟ ಶಾಸ್ತ್ರಗಳನ್ನು "ಸಿದ್ಧಾಂತ"ವೆಂತಲೂ ಕರೆಯುತ್ತಾರೆ.

"ಸಮೌ ಸಿದ್ಧಾಂತರಾದ್ಧಾಂತೌ" (ಅಮರಕೋಶ, ೧-೫-೪) ಎಂಬ ಶ್ರೀ ಅಮರಸಿಂಹನ ವಚನಾನುಸಾರವಾಗಿ, ಅಂತಿಮವಾದ ನಿರ್ಣಯಕ್ಕೆ

ಸಿದ್ಧಾಂತ ಇಲ್ಲವೇ ರಾದ್ಧಾಂತಗಳೆಂಬ ಶಬ್ದಗಳನ್ನು ಬಳಸುವದಾಗಿ ಕಂಡು ಬರುತ್ತದೆ. ಹೀಗಿರುವಾಗ ಸಿದ್ಧಾಂತ ಶಬ್ದಕ್ಕೆ ಶಿವಾಗಮಗಳೆಂಬುದಾಗಿ ಹೇಗೆ ಅರ್ಥೈಸುವುದು? ಎಂಬ ಪ್ರಶ್ನೆ ಬಂದಾಗ, ಇದಕ್ಕೆ ಶ್ರೀ ಅಘೋರಶಿವಾಚಾರ್ಯರು ಹೀಗೆ ನಿರ್ಣಯವನ್ನು ಕೊಡುತ್ತಾರೆ—ಶಬ್ದಗಳಿಗೆ ಯೌಗಿಕಾರ್ಥವೆಂತಲೂ ರೂಢಾರ್ಥವೆಂತಲೂ ಎರಡು ಪ್ರಕಾರದ ಅರ್ಥಗಳು ಹೊರಡುತ್ತವೆ. ಶಬ್ದದ ವ್ಯುತ್ಪತ್ತಿ ಲಭ್ಯವಾದ ಅರ್ಥವು ಯೌಗಿಕಾರ್ಥವು. ಉದಾ :– "ಪಂಕಜ" ಎನ್ನುವ ಶಬ್ದದ ವ್ಯುತ್ಪತ್ತಿ ಲಭ್ಯವಾದ ಅರ್ಥವು ಪಂಕ=ಕೆಸರಿನಲ್ಲಿ ಜಾತಂ=ಜನಿಸಿದ್ದು ಅರ್ಥಾತ್ ಕೆಸರಿನಲ್ಲಿ ಹುಟ್ಟಿದ್ದು ಎಂದಾಗುವದು. ಕೆಸರಿನಲ್ಲಿ ಅನೇಕ ಕ್ರಿಮಿ ಕೀಟಗಳು ಜನಿಸುವಂತೆ ಕಮಲವೂ ಜನಿಸುತ್ತದೆ. ಪಂಕಜ ಎಂಬ ಶಬ್ದಕ್ಕೆ ಲೋಕದಲ್ಲಿ ಕಮಲವೆಂತಲೇ ರೂಢಿಯಲ್ಲಿದೆ. ಲೋಕದ ರೂಢಿಯಲ್ಲಿರುವ ಅರ್ಥವನ್ನು ರೂಢಾರ್ಥವೆನ್ನುವರು- ಹೀಗೆ "ಪಂಕಜ"ಎಂಬ ಶಬ್ದಕ್ಕೆ ಯೌಗಿಕವಾಗಿ ಕೆಸರಿನಲ್ಲಿ ಜನಿಸಿದ್ದು ಎಂಬ ಅರ್ಥಕ್ಕನುಸಾರವಾಗಿ ಕಮಲದ ಜೊತಗೆ ಕ್ರಿಮಿ–ಕೀಟಗಳೆಂಬ ಅರ್ಥ ಹೊರಡುತ್ತಿದ್ದರೂ, ಲೋಕದ ರೂಢಿಯಲ್ಲಿ ಪಂಕಜ ಶಬ್ದದಿಂದ ಕಮಲವೆಂಬ ಅರ್ಥವನ್ನೇ ಸ್ವೀಕರಿಸುವಂತೆ, "ಸಿದ್ಧಾಂತ" ಎಂಬ ಶಬ್ದಕ್ಕೆ "ಸಿದ್ಧೋಽಂತೋ ನಿಶ್ಚಯೋ ಯಸ್ಮಿನ್ ಸಃ ಸಿದ್ಧಾಂತಃ" ಎನ್ನುವ ವ್ಯುತ್ಪತ್ತಿಯ ಪ್ರಕಾರ, ಕೊನೆಯದಾದ ನಿರ್ಣಯವೆನ್ನುವ ಯೌಗಿಕಾರ್ಥವಾಗುತ್ತಿದ್ದರೂ, ಶ್ರೀ ಶಿವನ ಮುಖಾರವಿಂದದಿಂದ ಬಂದ ನಿರ್ಣಯವೇ ಕೊನೆಯದಾದ ನಿರ್ಣಯವು—ಎಂಬುದಾಗಿ ಲೋಕದಲ್ಲಿ ರೂಢಿ ಇರುವದರಿಂದ, ಹೀಗೆ ಈ ಯೋಗ ಮತ್ತು ರೂಢಿ ಶಕ್ತಿಗಳ ಬಲದಿಂದ, ಸಿದ್ಧಾಂತವೆಂಬ ಶಬ್ದಕ್ಕೆ ಶಿವಾಗಮಗಳೆಂತಲೇ ಅರ್ಥವಾಗುವದು. ಅಂತೆಯೇ ಶಿವೋಕ್ತಗಳಾದ ೨೮ ಆಗಮಗಳನ್ನು ಸಿದ್ಧಾಂತಾಗಮಗಳೆಂತಲೂ ಕರೆಯುತ್ತಾರೆ. ಹಾಗಾದರೆ ಈ ಆಗಮಗಳ ಹೆಸರುಗಳೇನು? ಎಂಬ ಪ್ರಶ್ನೆ ಉದ್ಭವಿಸಿದಾಗ ಶ್ರೀ ನೀಲಕಂಠಶಿವಾಚಾರ್ಯರು ಕ್ರಿಯಾಸಾರದ ಉಪೋದ್ಘಾತ ಪ್ರಕರಣದಲ್ಲಿ—

(೧) ಕಾಮಿಕಾಗಮ (೨) ಯೋಗಜಾಗಮ (೩) ಚಿಂತ್ಯಾಗಮ
(೪) ಕಾರಣಾಗಮ (೫) ಅಜಿತಾಗಮ (೬) ದೀಪ್ತಾಗಮ
(೭) ಸೂಕ್ಷ್ಮಾಗಮ (೮) ಸಹಸ್ರಾಗಮ (೯) ಅಂಶುಮಾನಾಗಮ

(೧೦) ಸುಪ್ರಭೇದಾಗಮ (೧೧) ವಿಜಯಾಗಮ (೧೨) ನಿಃಶ್ವಾಸಾಗಮ
(೧೩) ಸ್ವಾಯಂಭುವಾಗಮ (೧೪) ಅನಲಾಗಮ (೧೫) ವೀರಾಗಮ
(೧೬) ರೌರವಾಗಮ (೧೭) ಮುಕುಟಾಗಮ (೧೮) ವಿಮಲಾಗಮ
(೧೯) ಚಂದ್ರಜ್ಞಾನಾಗಮ (೨೦) ಬಿಂಬಾಗಮ (೨೧) ಪ್ರೋದ್ಗೀತಾಗಮ
(೨೨) ಲಲಿತಾಗಮ (೨೩) ಸಿದ್ಧಾಗಮ (೨೪) ಸಂತಾನಾಗಮ
(೨೫) ಶರ್ವೋಕ್ತಾಗಮ (೨೬) ಪಾರಮೇಶ್ವರಾಗಮ (೨೭) ಕಿರಣಾಗಮ
(೨೮) ವಾತುಲಾಗಮ—ಎಂಬುದಾಗಿ ಆಗಮಗಳ ಹೆಸರುಗಳನ್ನು ಪ್ರತಿಪಾದಿಸಿದ್ದಾರೆ.

ಇವುಗಳಲ್ಲಿ ಕ್ರಮವಾಗಿ ಮೊದಲಿನ ೧೦ ಆಗಮಗಳು ಶ್ರೀಶಿವನಿಂದ, ಉಳಿದ ೧೮ ಆಗಮಗಳು ಶ್ರೀ ರುದ್ರನಿಂದ ಉಪದೇಶಿಸಲ್ಪಟ್ಟಿರುತ್ತವೆ. ಈ ಎಲ್ಲ ಆಗಮಗಳೂ ಅಪಾರವಾದ ಜ್ಞಾನಸಂಪತ್ತಿನಿಂದ ಕೂಡಿದವುಗಳಾಗಿವೆ.

**ಆಗಮಗಳ ಕಾಲ :**

ಆಗಮ ಸಂಸ್ಕೃತಿಯು ಹರಪ್ಪಾ-ಮೊಹೆಂಜೋದಾರೋ ಕಾಲದಲ್ಲಿ ದೊರೆತ ಭೂಗತ ಅವಶೇಷಗಳಲ್ಲಿ ಕಂಡುಬರುವದರಿಂದ ಇವುಗಳು ಇಂದಿಗೆ ಸುಮಾರು ೫ ಸಾವಿರ ವರ್ಷಗಳಿಗಿಂತಲೂ ಪೂರ್ವದವುಗಳೆಂದು ಅನೇಕ ಇತಿಹಾಸಜ್ಞರ ಅಭಿಪ್ರಾಯವಾಗಿದೆ. ಇಷ್ಟು ಪ್ರಾಚೀನವಾದ ನಮ್ಮ ಆಗಮ ಸಾಹಿತ್ಯವು ಆದೆಷ್ಟೋ ನಷ್ಟವಾಗಿ ಸದ್ಯಃ ಅಲ್ಪಪ್ರಮಾಣದಲ್ಲಿ ದೊರೆಯುತ್ತಿರುವುದು ಭಾರತೀಯರ ದುರದೃಷ್ಟವೆನ್ನಬೇಕಾಗಿದೆ.

**ಆಗಮಗಳ ವಿಷಯ (ವಸ್ತು) :**

ಆಗಮಗಳಲ್ಲಿ ಕ್ರಿಯಾಪಾದ, ಚರ್ಯಾಭಾವ, ಯೋಗಪಾದ ಮತ್ತು ಜ್ಞಾನ (ವಿದ್ಯಾ) ಪಾದಗಳೆಂದು ನಾಲ್ಕು ಭಾಗಗಳಿರುತ್ತವೆ. ಇವುಗಳ ಕ್ರಿಯಾಪಾದದಲ್ಲಿ ದೇವಾಲಯಗಳ ಸ್ಥಾಪನೆ, ವಿಗ್ರಹಗಳ ನಿರ್ಮಾಣ, ಹಾಗೂ ಅವುಗಳ ಪ್ರತಿಷ್ಠಾಪನೆಯ ವಿಷಯಗಳೂ ಪ್ರತಿಪಾದಿಸಲ್ಪಟ್ಟವೆ. ಚರ್ಯಾಪಾದದಲ್ಲಿ ಪ್ರತಿಷ್ಠಿತಮೂರ್ತಿಗಳ ಪೂಜಾ ಉತ್ಸವ ಹಾಗೂ ಹವನಾದಿ ವಿಷಯಗಳು ನಿರೂಪಿಸಲ್ಪಟ್ಟವೆ. ಯೋಗಪಾದದಲ್ಲಿ ಅಷ್ಟಾಂಗಯೋಗ ಸಾಧನೆಯೂ ಮತ್ತು ಜ್ಞಾನಪಾದದಲ್ಲಿ ದಾರ್ಶನಿಕ ವಿಷಯಗಳಾದ ಪತಿ, ಪಶು

ಹಾಗೂ ಪಾಶಗಳ ಸ್ವರೂಪದ ಜೊತೆಗೆ ಜಗದುತ್ಪತ್ತಿಯಲ್ಲಿ ಬರುವ ೩೬ ತತ್ತ್ವಗಳ ಸ್ವರೂಪವೂ ವಿಶೇಷವಾಗಿ ವರ್ಣಿಸಲ್ಪಟ್ಟಿವೆ.

**ವೀರಶೈವಧರ್ಮದರ್ಶನಗಳ ಮೂಲಸ್ರೋತ :**

> ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
> ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಮ್ ॥
>
> (ಸಿ. ಶಿ. ೫–೧೪)

ಎನ್ನುವ ಶ್ರೀ ಜಗದ್ಗುರು ರೇಣುಕಭಗವತ್ಪಾದರ ಉಪದೇಶದಂತೆ, ಪೂರ್ವದಲ್ಲಿ "ಸಿದ್ಧಾಂತ" ಶಬ್ದದಿಂದ ಪ್ರತಿಪಾದಿಸಲ್ಪಟ್ಟ ೨೮ ಶೈವಾಗಮಗಳ ಉತ್ತರಭಾಗದಲ್ಲಿ ಅಂದರೆ ಈ ಆಗಮಗಳ ಕ್ರಿಯಾ, ಚರ್ಯಾ, ಯೋಗ ಹಾಗೂ ಜ್ಞಾನ ಪಾದಗಳ ಉತ್ತರಭಾಗದಲ್ಲಿ ವೀರಶೈವಧರ್ಮದ ತತ್ತ್ವತ್ರಯಗಳಾದ ಅಷ್ಟಾವರಣ, ಪಂಚಾಚಾರ, ಹಾಗೂ ಷಟ್‌ಸ್ಥಲಗಳು ನಿರೂಪಿಸಲ್ಪಟ್ಟಿವೆ. ವೀರಶೈವಧರ್ಮದ ಈ ಅಷ್ಟಾವರಣಗಳಲ್ಲಿ ಬರುವ ಇಷ್ಟಲಿಂಗ, ಭಸ್ಮ ಮತ್ತು ರುದ್ರಾಕ್ಷಧಾರಣಾದಿಗಳು ವೇದಗಳಲ್ಲಿಯೂ ತತ್ರ ತತ್ರ ಪ್ರತಿಪಾದಿತಗಳಾಗಿರುವದರಿಂದ, ಸಿದ್ಧಾಂತಾಗಮೋಕ್ತಗಳಾದ ಈ ತತ್ತ್ವಗಳು ಕೇವಲ ಆಗಮಗಳ ಸಮ್ಮತಗಳಷ್ಟೇ ಅಲ್ಲ, ವೇದಸಮ್ಮಗಳೆಂತಲೂ ತಿಳಿಯಬೇಕು. ಮುಂದೆ ಆಯಾ ವಿಷಯಗಳನ್ನು ನಿರೂಪಿಸುವಾಗ ಆ ವೇದಮಂತ್ರಗಳನ್ನು ಕೂಲಂಕಷವಾಗಿ ವಿಚಾರಿಸುತ್ತೇವೆ.

ಹೀಗೆ ವೀರಶೈವಧರ್ಮಕ್ಕೆ ಆಗಮಗಳೇ ಮೂಲಗಳಾಗಿದ್ದರೂ ಆಗಮಸಮ್ಮತವಾದ ವೇದಭಾಗವನ್ನು ವೀರಶೈವರು ಗ್ರಹಿಸುವದರಿಂದ ವೀರಶೈವಧರ್ಮವನ್ನು ತಾಂತ್ರಿಕ-ವೈದಿಕಮತವೆಂದೂ ಕರೆಯುತ್ತಾರೆ.

> ವೀರಶೈವಂ ವೈಷ್ಣವಂ ಚ ಶಾಕ್ತಂ ಸೌರಂ ವಿನಾಯಕಮ್ ।
> ಕಾಪಾಲಮಿತಿ ವಿಜ್ಞೇಯಂ ದರ್ಶನಾನಿ ಷಡೇವ ಹಿ ॥
>
> (ಪಾರಮೇಶ್ವರಾಗಮ ೧/೨೨–೨೩)

ಈ ಪಾರಮೇಶ್ವರಾಗಮದ ಉಕ್ತಿಯಲ್ಲಿ ಆಗಮಶಾಸ್ತ್ರಸಮ್ಮತಗಳಾದ ಷಡ್‌ದರ್ಶನಗಳು ನಿರೂಪಿತಗಳಾಗಿವೆ. ಇವುಗಳಲ್ಲಿ ವೀರಶೈವವೂ ಪರಿಗಣಿಸ

ಲ್ಪಟ್ಟಿರುವದರಿಂದ, ವೀರಶೈವರಿಗೆ ಆಗಮಸಾಹಿತ್ಯವೇ ಮೂಲಸಾಹಿತ್ಯವೆಂಬುದು ತಿಳಿದುಬರುತ್ತದೆ. ಇಷ್ಟೇ ಅಲ್ಲದೆ—

ನ ವೀರಶೈವಸದೃಶಂ ಮತಮಸ್ತಿ ಜಗತ್ತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಮ್ ॥
(ಪಾ. ಆಗಮ ೧-೪೨)

ಎಂಬುದಾಗಿ ಅದೇ ಪಾರಮೇಶ್ವರಾಗಮದಲ್ಲಿಯೇ—ಪೂರ್ವೋಕ್ತಗಳಾದ ಷಡ್ದರ್ಶನಗಳಲ್ಲಿ ವೀರಶೈವ ದರ್ಶನವು ತನ್ನ ಸಮನ್ವಯಾತ್ಮಕ ಉದಾತ್ತ ಭಾವನೆಯಿಂದ ಸರ್ವೋತ್ಕೃಷ್ಟವಾಗಿದೆ—ಎಂದು ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಈ ಧರ್ಮದ ಉತ್ಕೃಷ್ಟ ಆಚಾರಗಳನ್ನು ಆಚರಣೆಯಲ್ಲಿ ತಂದು ಈ ಧರ್ಮದ ಹಿರಿಮೆ ಗರಿಮೆಗಳನ್ನು ಕಾಪಾಡಿಕೊಳ್ಳುವದು ಪ್ರತಿಯೊಬ್ಬ ವೀರಶೈವನ ಆದ್ಯ ಕರ್ತವ್ಯವಾಗಿದೆ.

### ದಾರ್ಶನಿಕ ದೃಷ್ಟಿಯಿಂದ (ವೀರಶೈವ) ಶಬ್ದಾರ್ಥ ನಿರೂಪಣೆ :

ವೀರಶೈವವು ಕೇವಲ ಸಾಂಪ್ರದಾಯಿಕ ತತ್ತ್ವಗಳನ್ನು ನಿರೂಪಿಸುವ ಧರ್ಮ ಮಾತ್ರವಲ್ಲ; ಅದೊಂದು ಸರ್ವಗ್ರಾಹ್ಯವಾದ ದರ್ಶನವೂ ಆಗಿದೆ. ಅಂತೆಯೇ ವೀರಶೈವ ಶಬ್ದವನ್ನು ದಾರ್ಶನಿಕವಾಗಿಯೂ ಸಾಂಪ್ರದಾಯಿಕವಾಗಿಯೂ ನಿರೂಪಿಸಬೇಕಾದ್ದರಿಂದ ಮೊದಲು ದಾರ್ಶನಿಕ ಪಕ್ಷವನ್ನೇ ವಿಚಾರಿಸೋಣ.

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥

ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥

ವೇದಾಂತಜನ್ಯಂ ಯದ್ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥
(ಸಿ. ಶಿ. ೫/೧೫-೧೭)

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮನಾದ ಶ್ರೀ ಅಗಸ್ತ್ಯ ಮಹರ್ಷಿಯನ್ನುದ್ದೇಶಿಸಿ ಮೇಲೆ ಹೇಳಿದ ಪ್ರಕಾರವಾಗಿ ವೀರಶೈವ ಶಬ್ದದ ದಾರ್ಶನಿಕ ಪಕ್ಷವನ್ನು ಉಪದೇಶಿಸಿದ್ದಾರೆ. ಅದು ಹೇಗೆಂದರೆ ವೀರಶೈವ ಶಬ್ದದಲ್ಲಿ ಬರುವ "ವೀ" ಶಬ್ದಕ್ಕೆ "ವೀ ಗತಿ-ವ್ಯಾಪ್ತಿ-ಪ್ರಜನನಕಾಂತ್ಯಸನ ಖಾದನೇಷು" (ಅದಾದಿ ೧೧೩೩) ಎಂಬುದಾಗಿ ಪಾಣಿನಿಯ ಧಾತುಪಾಠದಲ್ಲಿ ವೀ ಧಾತುವಿಗೆ ಅನೇಕ ಅರ್ಥಗಳಿರುವಂತೆ, ಗತಿ ಅರ್ಥಾತ್ ಗಮನವೆಂಬ ಅರ್ಥವೂ ಇದೆ. "ಯೇ ಗತ್ಯರ್ಥಕಾಸ್ತೇ ಜ್ಞಾನಾರ್ಥಕಾಃ" ಎನ್ನುವ ನಿಯಮಾನುಸಾರವಾಗಿ ಗಮನಾರ್ಥವನ್ನು ಬೋಧಿಸುವ ಎಲ್ಲ ಧಾತುಗಳೂ ಜ್ಞಾನಾರ್ಥವನ್ನು ಬೋಧಿಸುವವಾದ್ದರಿಂದ, ಇಲ್ಲಿ "ವೀ" ಧಾತುವಿನ ಅರ್ಥವು "ವಿದ್ಯಾ" ಇಲ್ಲವೇ "ಜ್ಞಾನ" ಎಂದಾಗುವದು. ಅದರಂತೆ ವೀರಶೈವ ದಲ್ಲಿಯ "ರ" ದ ಅರ್ಥವು—ರಮಣ ಅರ್ಥಾತ್ ಆನಂದಪಡು—ಎಂದಾಗುವದು. ಹೀಗೆ ವೀ ಶಬ್ದದಿಂದ ತಿಳಿಸಲ್ಪಡುವ ಶಿವ-ಜೀವರ. ಇಲ್ಲವೇ ಅಂಗ-ಲಿಂಗಗಳ ಏಕತ್ತ್ವವನ್ನು ಬೋಧಿಸುವ ವಿದ್ಯೆಯಲ್ಲಿ ಯಾವ ಶಿವಭಕ್ತನು ವಿಶೇಷವಾಗಿ ರಮಣವನ್ನು ಮಾಡುವನೋ (ಆನಂದವನ್ನು ಹೊಂದುವನೋ) ಅವನೇ ವೀರಶೈವನು.

## ಶ್ರೀ ಎಸ್. ಎನ್. ದಾಸಗುಪ್ತರ ಆಕ್ಷೇಪ ಮತ್ತು ಪರಿಹಾರ—

ಶ್ರೀ ಎಸ್. ಎನ್. ದಾಸಗುಪ್ತರು ಶ್ರೀ ಸಿದ್ಧಾಂತಶಿಖಾಮಣಿ ಗ್ರಂಥದಲ್ಲಿ ಹೇಳಲ್ಪಟ್ಟ ವೀರಶೈವ ಶಬ್ದದ ದಾರ್ಶನಿಕ ನಿರ್ವಚನದಮೇಲೆ ಈ ರೀತಿಯಾಗಿ ಆಕ್ಷೇಪವನ್ನು ಮಾಡಿದ್ದಾರೆ—

"The Siddhanta-Sikhamani gives a fanciful interpretation of word, "Vira"–as being composed of 'Vi' meaning knowledge of identity with Brahman, and 'ra' as meaning someone who takes pleasuie in such knowledge. But such an etymology, accepting it to be correct, would give the form "Vira" and not "Veera". No explanation is given as how 'Vi' standing for 'Vidya', would iengthen its vowel into 'Vee'. I, therefore, find it difficult to accept this etymo-

logical interpretation as justifying the application of the world "Vira" to Veera Saiva. Moreover, most systems To Vedantic thought could be called Veera in such an intorpretation, for most types of Vedanta would feel enjoyment and bliss in true knowledge of identity. The word 'Vira' would thus not be a distinctive mark by which we could distinguish Vira-Saivas from the adherents of other religions. Most of the Agamic Saivas also would believe in the ultimate identity of individuals with Brahman or Siva."

(A History of indian Philosophy, Vol. V, pp. 44-45.)

ಇವರ ಈ ಆಕ್ಷೇಪದ ತಾತ್ಪರ್ಯವೇನೆಂದರೆ–ಸಿದ್ಧಾಂತಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟ "ವೀರ"ಶಬ್ದದ ವ್ಯುತ್ಪತ್ತಿಯು ಬಹಳ ವಿಚಿತ್ರವಾಗಿದೆ. ಶಿವ-ಜೀವರ ಏಕತ್ವವನ್ನು ಬೋಧಿಸುವ ವಿದ್ಯೆಯಲ್ಲಿ ರಮಣ ಮಾಡುವವನಿಗೆ ವೀರನೆನ್ನುವದಾದರೆ, ಈ ಶಬ್ದವು "ವಿರ" ಆಗುವದೇ ವಿನಹ "ವೀರ" ಆಗು ಲಾರದು. ಏಕೆಂದರೆ ವಿದ್ಯಾ ಶಬ್ದದಲ್ಲಿ ಬಂದಿರುವ (ವಿ) ಹ್ರಸ್ವವಿದೆ. ಅಂದ ಬಳಿಕ ಆ ಹ್ರಸ್ವ "ವೀ" ದೀರ್ಘ ಹೇಗಾಯಿತು ?

ಇನ್ನು ಎರಡನೇ ಪ್ರಶ್ನೆ—ಏನೆಂದರೆ ಅದ್ವೈತ ವೇದಾಂತಿಗಳೂ ಹಾಗೂ ಅದ್ವೈತವನಂಗೀಕರಿಸುವ ಕೆಲ ಶೈವ ಸಂಪ್ರದಾಯದ ಸಾಧಕರೂ ಶಿವ-ಜೀವರ ಏಕತ್ವವನ್ನು ಬೋಧಿಸುವ ತತ್ತ್ವಜ್ಞಾನರೂಪವಾದ ವಿದ್ಯೆಯಲ್ಲಿ ರಮಣವನ್ನು ಮಾಡುವದರಿಂದ ವೀರ ವಿಶೇಷಣವು ಅವರಿಗೂ ಸಹ ಬರುವದರಿಂದ ಅವರಿಂದ ವೀರಶೈವರನ್ನು ಬೇರ್ಪಡಿಸುವ ಬಗೆ ಹೇಗೆ ? "ವ್ಯಾವೃತ್ತಿರ್ವ್ಯವಹಾರೋ ವಾ ಲಕ್ಷಣಸ್ಯ ಪ್ರಯೋಜನಮ್" ಎನ್ನುವ ನಿಯಮದ ಪ್ರಕಾರ, ಇಲ್ಲಿ ಈ ವೀರ ವಿಶೇಷದಿಂದ ವೀರಶೈವರನ್ನು ಇತರ ಶೈವಸಂಪ್ರದಾಯದವರಿಂದ ಬೇರ್ಪಡಿಸು ವದು ಅಸಂಭವವಾಗಿ ತೋರುತ್ತಿದೆ.

ಶ್ರೀ ಎಸ್. ಎನ್. ದಾಸಗುಪ್ತರ ಈ ಎರಡೂ ಆಕ್ಷೇಪಗಳು ಅವಿಚಾರಿತ ರಮಣೀಯಗಳಾಗಿರುತ್ತವೆ. ಸಿದ್ಧಾಂತಶಿಖಾಮಣಿಯಲ್ಲಿ—

